24

# ಅಚಲ

ಬಿಡಿಪ್ರತಿ : 4 ರೂ.

ತಿಂಗಳ ಪತ್ರಿಕೆ

ಮೇ 2007

## ಒಳಗೇನಿದೆ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು

## ಅಚಲ

ಸಂಪುಟ - 22 ಸಂಚಿಕೆ : 5

*ಸಂಪಾದಕ ಮಂಡಳಿ*

ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾ ನಾಗರಾಜ್
ಹೆಚ್. ಎನ್. ಗೀತಾ
ಹೇಮಲತಾ ಮಹಿಷಿ

*ಪ್ರಕಾಶಕರು*

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.

**Achala - Edited by**
**Dr. N. Gayathri**

**Published by**
**Dr. G. Ramakrishna on behalf of Jagruthi Mahila Adhyayana Kendra**

**Printed at**
Lipi Mudrana
**Bangalore - 560 004**

Statement about ownership and other Particulars about newspaper ACHALA- Form IV (See Rule 8)

| | | |
|---|---|---|
| 1. Place of Publication | : | Bangalore, Karnataka State |
| 2. Periodicity of Publication | : | Monthly |
| 3. Printer's Name, Address | : | **Lipi Mudrana**<br>Basavanagudi, Bangalore-4 |
| 4. Publisher's Name | : | **Dr. G. Ramakrishna**<br>for Jagruthi Mahila Adhyayana Kendra, Bangalore |
| Nationality | : | Indian |
| Address | : | 108, Skyline Surabhi, 14-P, Vidyapeeta Raod, B.S.K. III Stage, Bangalore - 560 085 |
| 5. Editor's Name | : | Dr. N. Gayathri<br>108, Skyline Surabhi, 14-P, Vidyapeeta Raod, B.S.K. III Stage, Bangalore - 560 085 |
| 6. Name & Address of Individuals who own the news paper | : | **Jagruthi Mahila Adhyayana Kendra**<br>108, Skyline Surabhi, 14-P, Vidyapeeta Raod, B.S.K. III Stage, Bangalore - 560 085 |

*I, G. Ramakrishna, here by declare that the particular given above are true to the best of my knowledge and belief.*

*Bangalore*
*25-3-2007*

*sd/-*
*G. Ramakrishna*

## ಸಂಪಾದಕೀಯ  ಮಹಿಳೆಯನ್ನು ಗೃಹದಲ್ಲಿ ಬಂಧಿಸಿಡುವ ವಿಫಲವಾಧ ಯತ್ನ

ಕಳೆದ ಐವತ್ತು ವರ್ಷಗಳಲ್ಲಿ ಮಹಿಳೆಯನ್ನು ಕುರಿತಂತೆ ಹಲವಾರು ಪ್ರಗತಿಪರ ಕಾನೂನುಗಳು ಬಂದಿವೆ. ಅವುಗಳನ್ನು ನಿಜ ವಾಸ್ತವದಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರುವುದರಲ್ಲಿ ಮುತುವರ್ಜಿ ತೋರಿಸದ ಸರ್ಕಾರ 'ರಾತ್ರಿ ಪಾಳಿ' ಮಾಡುವ ಮಹಿಳೆಯರ ಮೇಲೆ ದಿಢೀರನೆ ಕಾಳಜಿ ತೋರಿಸಿದ್ದು ಮತ್ತು ಎಲ್ಲರಿಂದಲೂ ನಿಂದನೆಗೆ, ಪ್ರತಿಭಟನೆಗೆ ಗುರಿಯಾದದ್ದೂ ಈಗ ಇತಿಹಾಸ.

ಈ ವರ್ಷದ ಮೇ ದಿನಾಚರಣೆ ಮಹಿಳೆಯರಿಗೆ ವಿಶಿಷ್ಟವಾದದ್ದು. ಕಾರ್ಮಿಕ ದಿನಾಚರಣೆಯ ಸಮಾರಂಭವೊಂದರಲ್ಲಿ ಕಾರ್ಮಿಕ ಸಚಿವ ಇಕ್ಬಾಲ್ ಅನ್ಸಾರಿ ಮಹಿಳಾ ಕಾರ್ಮಿಕರಿಗೆ ರಾತ್ರಿ ಪಾಳಿಯನ್ನು ನಿಷೇಧಿಸುವುದಾಗಿ ಹೇಳಿದಾಗ, ಎಲ್ಲರೂ ಅದನ್ನು 'ರಾಜಕಾರಣಿಗಳ ಭಾಷಣ'ವೆಂದು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ. ಆದರೆ ಏಪ್ರಿಲ್ 30 ರಂದೇ ಕರ್ನಾಟಕದ ಗೆಜೆಟ್‌ನಲ್ಲಿ ಈ ಕುರಿತು ತರಾತುರಿಯಲ್ಲಿ ಪ್ರಕಟಣೆಯೊಂದನ್ನು ಹೊರಡಿಸಲಾಗಿತ್ತು. ಅದರಂತೆ ಕರ್ನಾಟಕ ಅಂಗಡಿ ಮತ್ತು ವಾಣಿಜ್ಯ ಸಂಸ್ಥೆ ಕಾಯಿದೆ 1961 ಕ್ಕೆ ತಿದ್ದುಪಡಿಯನ್ನು ತಂದು ಕರ್ನಾಟಕ ಅಂಗಡಿಗಳು ಮತ್ತು ವಾಣಿಜ್ಯ ಸಂಸ್ಥೆಗಳ ಕಾಯ್ದೆ 2007 ರ ಪ್ರಕಾರ ಮಹಿಳಾ ನೌಕರರು ರಾತ್ರಿ ಎಂಟು ಗಂಟೆಯ ನಂತರ ದುಡಿಯುವಂತಿಲ್ಲ. ಮುದ್ರಣ ಮಾಧ್ಯಮ, ಖಾಸಗಿ ಸಂಸ್ಥೆಗಳು, ಕಛೇರಿಗಳು, ಹೋಟೆಲ್‌ಗಳು ಮತ್ತು ಮನರಂಜನಾ ಸಂಸ್ಥೆಗಳಲ್ಲಿ ಮಹಿಳೆಯರನ್ನು ಎಂಟು ಗಂಟೆಯ ನಂತರವೂ ದುಡಿಸಿಕೊಂಡರೆ ಅಪರಾಧ ಎಂದು ಪರಿಗಣಿಸಲಾಗುತ್ತದೆ, ಎಂದು ಈ ಅಧಿಸೂಚನೆಯಲ್ಲಿ ತಿಳಿಸಲಾಗಿತ್ತು.

"ಕರ್ನಾಟಕ ಸರ್ಕಾರದ ಈ ನಿರ್ಧಾರ ಅಸಂಬದ್ಧವಾದದು. ದುಡಿಯುವ ಮಹಿಳೆಯರಿಗೆ ಭದ್ರತೆ ಒದಗಿಸಲು ವಿಫಲವಾದುದಕ್ಕೆ ಮಹಿಳೆಯರಿಗೆ ಇರುವ ಉದ್ಯೋಗಾವಕಾಶವನ್ನು ಏಕೆ ಕಿತ್ತುಕೊಳ್ಳಬೇಕು? ಸರ್ಕಾರದ ಈ ನಿರ್ಧಾರವನ್ನು ನಾವು ಪ್ರಬಲವಾಗಿ ಖಂಡಿಸುತ್ತೇವೆ ಮತ್ತು ಇದನ್ನು ಜಾರಿಗೊಳಿಸದಂತೆ ಮುಖ್ಯ ಮಂತ್ರಿಯವರಿಗೆ ಪತ್ರ ಬರೆಯುತ್ತೇವೆ". ಎಂದು ರಾಷ್ಟ್ರೀಯ ಮಹಿಳಾ ಆಯೋಗದ ಅಧ್ಯಕ್ಷೆ ಛೀಮಾರಿ ಹಾಕಿದರೆ ರಾಜ್ಯದ ಆಯೋಗದ ಅಧ್ಯಕ್ಷೆ ಪ್ರಮಿಳಾ ನೇಸರ್ಗಿಯವರೂ ಇದಕ್ಕೆ ದನಿಗೂಡಿಸಿದರು. ಎಲ್ಲ ಪ್ರಜ್ಞಾವಂತ ಸ್ತ್ರೀ ಪುರುಷರೂ, ಪ್ರಗತಿಪರ ಸಂಘಟನೆಗಳೂ ರಾತ್ರಿ ಪಾಳಿಯ ನಿಷೇಧವನ್ನು ಒಕ್ಕೊರಲಿನಿಂದ ಖಂಡಿಸಿದರು.

ಸರಕಾರದ ಈ ತರಾತುರಿ ಕ್ರಿಯೆಗೆ ಕಾರಣವಾದರೂ ಏನು? ವರ್ಷದ ಹಿಂದೆ ಸಾಫ್ಟ್‌ವೇರ್ ಇಂಜಿನಿಯರ್ ಪ್ರತಿಭಾ ರಾತ್ರಿಪಾಳಿ ಮಾಡುತ್ತಿರುವಾಗಲೇ ಕೊಲೆಗೀಡಾಗಿದ್ದಳು. ಅವಳ ಪ್ರಕರಣವನ್ನು ಖಂಡಿಸುವುದು ಮತ್ತು ಅದಕ್ಕೆ ಸೂಕ್ತ ಪರಿಹಾರ ಸೂಚಿಸುವುದು ಸರ್ಕಾರಕ್ಕೆ ಪ್ರತಿಷ್ಠೆಯ ವಿಷಯವಾಗಿತ್ತು. ಅದು 'ಪ್ರತಿಭಾ' ಎಂಬ ಹೆಣ್ಣು ಮಗಳೊಬ್ಬಳೊಬ್ಬಳ ಮೇಲಿನ ಕಾಳಜಿಯಾಗಿರದೆ, 'ಐಟಿ' ಕ್ಷೇತ್ರ ಬಗೆಗಿನ  ಒಲವಾಗಿತ್ತು. ಇದು ಆಗ ಅಂತರರಾಷ್ಟ್ರೀಯ ಸುದ್ದಿಯಾಗಿದ್ದುದ್ದು ಇದೇ ಕಾರಣಕ್ಕೆ. ಈಗ ಪ್ರತಿಭಾಳ ಕೊಲೆ ಪ್ರಕರಣದ ವಿಚಾರಣೆ ನ್ಯಾಯಾಲಯದಲ್ಲಿ ನಡೆಯುತ್ತಿದೆ. ಈ ಸಂದರ್ಭದಲ್ಲಿ 'ತೆನೆ ಹೊತ್ತ ಹೆಣ್ಣಿನ' ಸರ್ಕಾರ ತನ್ನ ಜವಾಬ್ದಾರಿ ಮರೆಯಬೇಕಾದ್ದು ಕರ್ತವ್ಯ ತಾನೇ? ಈ ತಿದ್ದುಪಡಿಯ ಬಗ್ಗೆ ತಿಳುವಳಿಕೆಯನ್ನು ಕಾನೂನು ಇಲಾಖೆಯ ಗಮನಕ್ಕೂ ತರದೆ ಗೆಜೆಟ್‌ನಲ್ಲಿ ಸೇರಿಸಿಯೇ ಬಿಟ್ಟಿತು.

ಈಗ ಆದದ್ದಾದರೂ ಏನು? ಕಾನೂನಿನ ವಿಷಯದಲ್ಲಿ ಕರ್ನಾಟಕ ಸರ್ಕಾರ ಮೂರ್ಖತನವನ್ನು ಸಾರ್ವಜನಿಕವಾಗಿ ಪ್ರಕಟಿಸುತ್ತಾ ಬಂದಿರುವುದು ಹೊಸದೇನಲ್ಲ. ಕರ್ನಾಟಕದ ಮಹಿಳೆಯರಿಗೆ ರಾತ್ರಿ ಪಾಳಿಯ ನಿಷೇಧ ಬ್ರಿಟನ್ನಿನ ಪತ್ರಿಕೆಗಳಲ್ಲು ಮುಖಪುಟದ ಸುದ್ದಯಾಯಿತೆನ್ನುವುದು ನಮಗೆಲ್ಲರಿಗೂ ಮುಜುಗರದ ವಿಷಯವೇ. 1961 ರ ಕಾಯಿದೆಯಲ್ಲಿ ಹೆಂಗಸರ ರಾತ್ರಿ ಪಾಳಿಯನ್ನು ನಿಷೇಧಿಸಲಾಗಿತ್ತಾದರೂ ಅದನ್ನು ಎಂದೂ ಕಟ್ಟು ನಿಟ್ಟಾಗಿ ಜಾರಿಗೆ ತರಲಿಲ್ಲ. ಈ ಅಸಂವಿಧಾನಕವಾದ ಕಾನೂನನ್ನು ಮುಂಚೆಯೇ ನಿಷೇಧಿಸಬೇಕಿತ್ತು. ಹಿಂದೆ ಮದ್ರಾಸ್ ಸರ್ಕಾರವು ಇಂತಹ ಪ್ರಯತ್ನವನ್ನು ಮಾಡ ಹೊರಟಾಗ ಮದ್ರಾಸ್ ಹೈಕೋರ್ಟು 2003 ರಲ್ಲಿ ಇದನ್ನು ಖಂಡಿಸಿ ತೀರ್ಪು ನೀಡಿತ್ತು. 2005 ರ ಸುಪ್ರೀಂಕೋರ್ಟಿನ ತೀರ್ಪೊಂದರಲ್ಲಿ ಮಹಿಳೆಯವರ ಈ ಹಕ್ಕುಗಳನ್ನು ಎತ್ತಿ ಹಿಡಿಯಲಾಗಿತ್ತು. ಕಾರ್ಖಾನೆಗಳ ಕಾಯಿದೆ ಕೇಂದ್ರ ಸರ್ಕಾರದ ಕಾಯಿದೆಯಾಗಿರುವಾಗ ರಾಜ್ಯಸರಕಾರ ಇದರಲ್ಲಿ ಏಕೆ ಮೂಗು ತೂರಿಸಬೇಕು? ಕರ್ನಾಟಕದ ಮಹಿಳೆಯರು ಇತರ ಪ್ರಾಂತ್ಯದ ಮಹಿಳೆಯರಿಗಿಂತ ಭಿನ್ನರೇ?

ಸಂವಿಧಾನದ ಮೂಲಭೂತ ಹಕ್ಕನ್ನು ಪ್ರತಿಪಾದಿಸುವ 14, 19 ಹಾಗೂ 21ನೇ ವಿಧಿಯನ್ನು ಉಲ್ಲಂಘಿಸುವ, ಹೆಣ್ಣಿನ ದುಡಿಯುವ ಹಕ್ಕನ್ನು ಕಿತ್ತುಕೊಳ್ಳುವ ಈ ಕಾನೂನು ನಮ್ಮ ಇಂದಿನ ರಾಜ್ಯ ಸರ್ಕಾರದ ಮಹಿಳಾಪರ ನೀತಿಯನ್ನು ಬಿಂಬಿಸುತ್ತದೆ. ಮಂಡಲದಲ್ಲಿ ಒಬ್ಬ ಮಹಿಳೆಗೂ ಸ್ಥಾನ ಕೊಡದ ಹಾಗೂ ರಾಜಕೀಯ, ಶೈಕ್ಷಣಿಕ ಮತ್ತು ಎಲ್ಲ ವಲಯಗಳಲ್ಲೂ ಮಹಿಳೆಯರನ್ನು ಅವಮಾನಿಸುತ್ತಲೇ ಇರುವ ಸರ್ಕಾರದ ಇತ್ತೀಚಿನ ಈ ಕ್ರಮ ನೆಗಡಿ ಬಂದಾಗ ಔಷಧಿ ಕೊಡದೆ ಮೂಗನ್ನೇ ಕೊಯ್ದಂತಲ್ಲವೇ?

**– ಎನ್. ಗಾಯತ್ರಿ**

# ವಸುಂಧರೆಯ ಗ್ಯಾನ–ಸ್ತ್ರೀ ಪರಿಸರವಾದ

ಡಾ॥ ಎಲ್.ಸಿ. ಸುಮಿತ್ರಾ

ಪರಿಸರ ಕುರಿತ ಚಿಂತನೆಯಲ್ಲಿ ಎರಡು ಮಾರ್ಗ. ಒಂದು ತಾವು ಹುಟ್ಟಿ ಬೆಳೆದ ಪರಿಸರದಿಂದ ಪ್ರೇರಿತರಾಗಿ ಮನುಷ್ಯ, ಭೂಮಿ, ಗಿಡಮರ, ಪ್ರಾಣಿ, ಪಕ್ಷಿ, ಕೀಟಗಳು ಎಲ್ಲವುಗಳನ್ನು ಕುರಿತು ಕಾಳಜಿಯ ಮೂಲಕ ಚಿಂತಿಸುವುದು. ಇನ್ನೊಂದು ಪುಸ್ತಕದ ಅರಿವಿನ ಮೂಲಕ, ಪರಿಸರ ಮಾಲಿನ್ಯ, ಜೀವ ವೈವಿಧ್ಯ, ಎನ್‌ಡೇಂಜರ್ ಸ್ಪೀಸಿಸ್ ಮುಂತಾದ ಪರಿಕಲ್ಪನೆಗಳ ಮೂಲಕ ರಸಾಯನ ಶಾಸ್ತ್ರ ಜೀವವಿಜ್ಞಾನಗಳ ತಿಳಿವನ್ನು ಬಳಸಿ ವಾಯು ಮಾಲಿನ್ಯ, ಪರಿಸರ ಮಾಲಿನ್ಯ ಎಂದು ಚಿಂತಿಸುವುದು.

**'ವಸುಂಧರೆಯ ಗ್ಯಾನ'** ಪುಸ್ತಕವನ್ನು ಬರೆದ ಕತೆಗಾರ್ತಿ **ಹೆಚ್.ನಾಗವೇಣಿಯವರದು** ಮೊದಲನೆಯ ಮಾರ್ಗ. ಆ ಮೂಲಕ ತಾವು ಕಂಡು ಅನುಭವಿಸಿದ, ಬೆಳೆದ ಪರಿಸರದಲ್ಲಿ ಆದ ಬದಲಾವಣೆಗಳನ್ನು ನಿಸರ್ಗ ಮತ್ತು ಮನುಷ್ಯ ಸಂಬಂಧಗಳನ್ನು ವಿಶ್ಲೇಷಿಸುತ್ತಾರೆ. ಇದು ಗಿಡಮರ, ಪ್ರಾಣಿ ಪಕ್ಷಿಗಳ ಜೊತೆಗೆ ಮನುಷ್ಯನನ್ನೂ ಒಳಗೊಂಡ ಪರಿಸರ ಪ್ರಜ್ಞೆ, ಪರಿಸರ ಪ್ರೀತಿಯಾಗಿ ಸಮಗ್ರ ನೋಟವೊಂದನ್ನು ಹೊಂದಿದೆ.

ಹೆಣ್ಣು ಮತ್ತು ಭೂಮಿ ಎರಡೂ ಇಂದು ಆಧುನಿಕತೆಯ ದಾಳಿಯಲ್ಲಿ ಅಧಿಕಾರಶಾಹಿ ಮತ್ತೂ ಶಕ್ತಿಕೇಂದ್ರಗಳ ನಡುವೆ ಸಿಲುಕಿ ನಲುಗಿ ಹೋಗಿವೆ. ಇಂದು ಪರಿಸರ ಸ್ತ್ರೀವಾದ ಒಂದು ಚಳವಳಿಯಾಗಿ ಬೆಳೆದಿದೆ. ಹೆಣ್ಣು ಮತ್ತು ಪರಿಸರದ ಮೇಲಿನ ದಬ್ಬಾಳಿಕೆ ಅಂತರ್ ಸಂಬಂಧಿತವಾಗಿದೆ. ಸ್ತ್ರೀವಾದ ಮತ್ತು ಪರಿಸರವಾದಗಳೂ ಕೂಡಾ ಅಂತರ್ ಸಂಬಂಧಿತ ವಾಗಿದೆ. ಪ್ರಭುತ್ವ, ಒಡೆತನ ಇರುವಲ್ಲಿ ಮನುಷ್ಯ ಸಂಬಂಧಗಳು ಆರೋಗ್ಯಕರವಾಗಿರುವುದಿಲ್ಲ. ಅಧಿಕಾರ ಶಾಹಿ ಮೌಲ್ಯ ವ್ಯವಸ್ಥೆಯಿಂದ ಮುಕ್ತವಾಗಿ, ಸ್ತ್ರೀವಾದ ಮತ್ತು ಪರಿಸರವಾದಗಳನ್ನೂ ಒಟ್ಟಾಗಿ ಗ್ರಹಿಸಿ ಆರೋಗ್ಯ ಕರವಾದ ಭವಿಷ್ಯವನ್ನು ರೂಪಿಸಿಕೊಳ್ಳಬೇಕಾದ ಅನಿವಾರ್ಯತೆಯಲ್ಲಿ ನಾವಿದ್ದೇವೆ.

ನಾಕನೇ ನೀರು, ಮೀಯುವ ಆಟದಂತಹ ಕಥಾ ಸಂಗ್ರಹಗಳು ಮತ್ತು 'ಗಾಂಧಿಬಂದ' ಕಾದಂಬರಿಯು ತಮ್ಮದೇ ಛಾಪನ್ನು ಮೂಡಿಸಿರುವ ಎಚ್.ನಾಗವೇಣಿ ಈಗ 'ವಸುಂಧರೆಯ ಗಾನ' ಹೆಸರಿನ ಪ್ರಬಂಧ ಸಂಕಲನವನ್ನು ಪ್ರಕಟಿಸಿದ್ದಾರೆ.

ಲೇಖಕಿ ತಾವು ಹುಟ್ಟಿ ಬೆಳೆದ ಕರಾವಳಿಯ ಕಡಲ ತಡಿಯ ಒಕ್ಕಲ ಮಕ್ಕಳ ಪರಿಸರದಲ್ಲಿ ಮೂರು ದಶಕಗಳ ಹಿಂದೆ ತಾವು ಕಳೆದ ಬಾಲ್ಯವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದರೂ, ಆ ಚಿತ್ರಗಳನ್ನು ಕೊಡುವುದಷ್ಟೇ ಅವರ ಉದ್ದೇಶವಲ್ಲ. ಬಾಲ್ಯದ ಆಡುಂಬೊಲದಲ್ಲಿ ಬಣ್ಣ ಬಣ್ಣದ ಜೀವಂತ ಆಟಿಕೆಗಳಾಗಿದ್ದ ಹಕ್ಕಿ, ಹೂ, ಮೀನು, ಏಡಿ, ಗಿಡಮರಗಳು ಆಗಿದ್ದಂತೆ ಈಗಿಲ್ಲದಿರುವುದೇ ಲೇಖಕಿಯ ಈ ಬರವಣಿಗೆಯ ಹಿಂದಿರುವ ತುಡಿತ.

ಇಪ್ಪತ್ತನೇ ಶತಮಾನದ ಕೊನೆಯ ಮೂರು ದಶಕಗಳಲ್ಲಿ ತೀವ್ರವಾಗಿ ಬದಲಾವಣೆಗೊಳಗಾದ ಅನೇಕ ಊರು, ನಗರಗಳಂತೆ ಮಂಗಳೂರು ಕೂಡ ತನ್ನ ಎಲ್ಲೆಗಳನ್ನು ವಿಸ್ತರಿಸಿಕೊಂಡಿತು. ನಗರದ ಉತ್ತರದಿಕ್ಕಿನಲ್ಲಾದ ಪಣಂಬೂರು ಬಂದರು ಸುತ್ತ ಮುತ್ತಲಿನ ಪರಿಸರದ ಜನಜೀವನದಲ್ಲಿ ಆಮೂಲಾಗ್ರ ಬದಲಾವಣೆ ತಂದಿತು. ಈ ಲೇಖಕಿ ಹುಟ್ಟಿ ಬೆಳೆದ ಊರು ಈ ಎಲ್ಲ ಬದಲಾವಣೆಗೆ ಒಳಗಾಗುವುದು ಅನಿವಾರ್ಯವಾಯಿತು. ಆಧುನಿಕತೆಯ ಬಿರುಗಾಳಿಯಲ್ಲಿ. ಉಳಿಸಿಕೊಳ್ಳಲೇಬೇಕಾದ ಎಷ್ಟೋ ಸಂಗತಿಗಳೂ ಹಾರಿ ಮರೆಯಾದವು. ಇಲ್ಲಿಯ ಲೇಖನ ಗಳು ಒಂದು ಬಗೆಯ 'ಸ್ತ್ರೀ ಪರಿಸರ ಪ್ರಜ್ಞೆ'ಯಲ್ಲಿ ರೂಪು ತಳೆದಿದೆ.

"ನಾನು ತೀರಾ ಸುಖಿ ಎಂದಂದುಕೊಳ್ಳುವ ಹೊತ್ತಲ್ಲಿ ಬಾಲ್ಯದ ನೆನಪುಗಳು ನನ್ನ ಗ್ಯಾನದತ್ತ ಸುಳಿಯದಿದ್ದರೂ, ದುಃಖ, ನೋವು, ಅಸಹಾಯಕತೆ ನನ್ನೊಳಗೆ ಮಡುಗಟ್ಟಿ ನಿಂತಾಗೆಲ್ಲ ಒಂದಷ್ಟು ನೆಮ್ಮದಿ, ಸಾಂತ್ವನಕ್ಕಾಗಿ ನಾನು ಆವಾಹಿಸಿಕೊಳ್ಳುವುದು ನನ್ನ ಬಾಲ್ಯವನ್ನು, ಬಾಲ್ಯದ ಒಡನಾಡಿಗಳನ್ನು... ನಿಷ್ಕಲ್ಮಶ ಪ್ರೀತಿ ಉಣಿಸುತ್ತಿದ್ದ ಅಂದಿನ ಜೀವ ಪರಿಸರವನ್ನು, ಆರೋಗ್ಯ ಪೂರ್ಣ ಸಾಮಾಜಿಕ ಪರಿಸರವನ್ನು" ಎಂದು ಲೇಖಕಿ ತನ್ನ ಮೊದಲ ಮಾತಿನಲ್ಲಿ ಬರೆದುಕೊಂಡಿದ್ದಾರೆ.

ತಾವು ಬಾಲ್ಯದಲ್ಲಿ ನೋಡಿದ ಪರಿಸರವೂ, ಮನುಷ್ಯ ಸಂಬಂಧಗಳೂ ಅಂದಿನ ರೂಪದಲ್ಲಿರದೆ, ಸಂಪೂರ್ಣ

ವಾಣಿಜೀಕರಣಗೊಂಡಿದೆ. 'ವಿಘಟನೆ'ಯ ದುರಂತಕ್ಕೆ ಗುರಿಯಾಗಿರುವ ಊರಿನ 'ಚಿತ್ರಗಳನ್ನು' ಈ ಬರಹಗಳಲ್ಲಿ ಮೂಡಿಸುವ ಪ್ರಯತ್ನ ಭತ್ತದ ಮೇಲೆ ಕೂತು ಹುತ್ತ ನೋಡಿದಂತೆ ಎಂದು ಲೇಖಕಿ ಹೇಳಿಕೊಳ್ಳುತ್ತಾರೆ.

ಬಾಲ್ಯದ ಲೋಕವನ್ನು ಅದರ ವೈವಿಧ್ಯತೆಗಳನ್ನು ಆಪ್ತತೆಯಿಂದ ನೆನಪಿಸಿ ಕೊಳ್ಳುವಂತೆಯೇ, ಅಲ್ಲಿನ ವೈರುಧ್ಯಗಳನ್ನೂ ಮರೆಯದಿರುವ ಔಚಿತ್ಯ ಪ್ರಜ್ಞೆ ಈ ಲೇಖಕಿಗಿದೆ. ಅಂದಿನ ಜಮೀನ್ದಾರಿಕೆಯ, ತಾರತಮ್ಯಗಳ ಜತೆಗೆ ಸೌಹಾರ್ದದ ಸಾಮರಸ್ಯದ ಚಿತ್ರಗಳನ್ನು ಕೊಡುತ್ತಾರೆ. ಮೀನು ಮಾರಿದ ನಂತರ "ಮೈತುಂಬ ಮೀನಿನ ನಾತ ಹೊತ್ತು ಬರುವ ಮಕ್ಕಳನ್ನು ಆ ಬ್ರಾಹ್ಮಣ ಮೇಷ್ಟ್ರು ಸುಧಾರಿಸಬೇಕಾದರೆ ಮೀಯುವ ಶಿಕ್ಷೆ ವಿಧಿಸುವುದು ಅವರಿಗೆ ಅನಿವಾರ್ಯವಾಗಿತ್ತು ನಿಜ. ತೊಟ್ಟಿ ತುಂಬಾ ನೀರು ತುಂಬಿಸಿಟ್ಟು ಕೈಯಲ್ಲಿ ತೆಂಗಿನ ನಾರು ಹಿಡಿದು ಸ್ವತಹ ಆ ಮಕ್ಕಳನ್ನು ತಾವೇ ಉಜ್ಜಿ ಮೀಯಿಸುವ ಕಾಯಕ ಆ ಮೇಷ್ಟ್ರದ್ದು. ನಾನು ಬಾಲ್ಯದಲ್ಲಿ ಕಂಡಿದ್ದ ಆ ಚಿತ್ರಣ ಅಂದಿದ್ದ ಆರೋಗ್ಯಕರ ಸಾಮಾಜಿಕ ಪರಿಸರಕ್ಕೊಂದು ಪುಟ್ಟ ನಿದರ್ಶನವಷ್ಟೆ" ಎಂದು ನೆನಪಿಸಿಕೊಳ್ಳುವ ಲೇಖಕಿ, ಆ ಬಗೆಯ ಸಾಮರಸ್ಯದ ಬದುಕಿನಲ್ಲಿ ಪವಿತ್ರ ಇಟ್ಟಿಗೆಯ ರಾಜಕೀಯ ಎಂದು ಮೂಗು ತೂರಿಸಿತೋ ಅಂದಿನಿಂದಲೇ ಕಡಲ ನೀರು ಕೋಮುದಲ್ಲುರಿಗೆ ಸಿಲುಕಿ ಕುದಿಯತೊಡಗಿತು" ಎಂದು ಬದಲಾದ ಪರಿಸರವನ್ನು ಕುರಿತು ವಿಷಾದದಿಂದ ಬರೆಯುತ್ತಾರೆ. (ಬರಿದಾಗು ತ್ತಿರುವ..... ಕಡಲು ಪುಟ 4 –5)

ಯಾಂತ್ರಿಕ ಮೀನುಗಾರಿಕೆಯಿಂದ ಮೀನುಗಳ ಸಂತತಿ ನಾಶವಾಗಿ ಕಡಲ ಒಡಲು ಬರಿದಾಗುವುದರ ಕುರಿತು ಕಳವಳಗೊಳ್ಳುತ್ತಾರೆ. ಒಂದು ಕಾಲದಲ್ಲಿ ಮೈಮನಗಳಿಗೆ ಚಿಕಿತ್ಸೆ ನೀಡುತ್ತಿದ್ದ ಕಡಲ ಸ್ನಾನ ಇಂದು ಪರಿಸರ ಮಾಲಿನ್ಯದಿಂದಾಗಿ ತನ್ನ ಮಹತ್ವ ಕಳೆದುಕೊಂಡಿದೆ ಎಂದು ಹೇಳುತ್ತಾ ಮನುಷ್ಯ ದುರಾಸೆಯಿಂದ ಕಡಲಿನ ಜಾಗವನ್ನು ಆಕ್ರಮಿಸಿಕೊಂಡಿರುವುದರಿಂದಲೇ, ಕಡಲ್ಕೊರೆತ ಸಂಭವಿಸುತ್ತಿರುವುದು ಎಂದು ಸಕಾರಣವಾಗಿಯೆ ಊಹಿಸುತ್ತಾರೆ.

"ನರ್ತೆಯ ನರ್ತನ" ಪ್ರಬಂಧದಲ್ಲಿ ರಾಸಾಯನಿಕ ಗೊಬ್ಬರ ಉಪಯೋಗಿಸಿ ಕೃಷಿ ಮಾಡತೊಡಗಿದ ಮೇಲೆ ಗದ್ದೆಯಲ್ಲಿರುತ್ತಿದ್ದ ನರ್ತೆ, ಏಡಿ, ಕಪ್ಪೆಗಳಂತಹ ಜೀವಿಗಳು ಮರೆಯಾದವು ಎಂದು ಹೇಳುತ್ತಾ ಗದ್ದೆಗಳೆಲ್ಲ ಸೈಟುಗಳಾಗಿ ಪರಿವರ್ತನೆಯಾದಾಗ ಬೆಳೆ ಬೆಳೆಯುವ ಭೂಮಿಯ ಪ್ರಮಾಣ ಕಡಿಮೆಯಾಗಿ ಆ ಪ್ರದೇಶದ ಗುಬ್ಬಚ್ಚಿಗಳೂ ಕಣ್ಮರೆಯಾದವು ಎಂದು ತಮ್ಮ ಬಾಲ್ಯದ ಪರಿಸರ ಜೀವಿಗಳ ವಿನಾಶದ ಕಾರಣಗಳನ್ನು ಹುಡುಕುತ್ತಾರೆ ಲೇಖಕಿ. ನಗರ ದಂಚಿನ ಹಳ್ಳಿಗಳು ನಗರ ಬೆಳೆದಂತೆ ಕಾಂಕ್ರೀಟ್ ಕಾಡುಗಳಾಗಿ, ಸಹಜವಾಗಿ ಅಲ್ಲಿರಬೇಕಾದ ಜೀವಿಗಳು ಅಳಿದು ಹೋಗುವುದು ಅಧುನಿಕತೆಯ ದುರಂತ ಗಳಲ್ಲೊಂದು.

"ಇವರ್‍ಯಾಕೆ ಕೊರಗರು" ಲೇಖನದಲ್ಲಿ ಅಸ್ಪೃಶ್ಯತೆಯ ಇಕ್ಕಳದಲ್ಲಿ ನರಳುತ್ತಿರುವ ಕೊರಗ ಜನಾಂಗದವರ ಕುರಿತ ಮನಕರಗುವ ಚಿತ್ರಗಳಿವೆ. ಒಡತಿ ಕೊಟ್ಟ ಉಪ್ಪಿನಕಾಯಿ ಅಸ್ಪೃಶ್ಯ ಕೊರಗನ ಕೈಗೆ ತಲುಪುವ ಮುನ್ನ ಹಲವು ಕೈಗಳನ್ನು ದಾಟಿ ಹೋಗುವಾಗ ಅವರೆಲ್ಲರೂ ಸ್ವಲ್ಪ ಸ್ವಲ್ಪವೇ ಕಬಳಿಸುವ ಪ್ರಕರಣ, ಸರ್ಕಾರದ ಯೋಜನೆಗಳು ಕೊರಗರನ್ನು ತಲುಪುವಲ್ಲಿ ಆಗುವ ತೊಂದರೆ ಗಳೇನೆಂಬುದನ್ನು ಸಂಕೇತಿಸುತ್ತದೆ. "ಮನುಷ್ಯಕುಲದ ಅಭ್ಯುದಯಕ್ಕೆ ಕಾರಣವಾಗಬೇಕಿದ್ದ 'ಅಕ್ಷರ ಸಂಸ್ಕೃತಿ'ಯ ಗುರಿಕಾರರು ದಲಿತತ್ವದ ದಾರುಣತೆಯನ್ನು ಅರ್ಥೈಸಿಕೊಳ್ಳದೇ, ನಿರಂತರ ಶೋಷಿತ ಅನಕ್ಷರಸ್ಥ ದಲಿತರ ನಿಷ್ಕ್ರೀಯತೆಯನ್ನು ತಮ್ಮ "ಸಮಾಜೋದ್ಧಾರ' ಕ್ಕಾಗಿ ಬಳಸಿಕೊಂಡಿದನ್ನೇ ಇದೀಗ ಈ ಸಮುದಾಯ ಗುರುತಿಸಿಕೊಳ್ಳುತ್ತಿದೆ" (ಪುಟ 103) ಎಂದು ಕೊರಗ ಸಮುದಾಯದಲ್ಲಿಂದ ಬದಲಾವಣೆಯ ಬಗ್ಗೆ, ಅವರಲ್ಲಿ ಮೂಡಿದ ಅರಿವಿನ ಕುರಿತು ಲೇಖಕಿ ಸಮಾಧಾನ ತಾಳುತ್ತಾರೆ. ('ದಾನ' ಕತೆಯಲ್ಲಿ ಇದೇ ವಸ್ತುವಿನ ಕುರಿತು ಬರೆದಿದ್ದಾರೆ)

ಬಿಡಿ ಉದ್ಯಮದಿಂದಾಗಿ ದಕ್ಷಿಣ ಕನ್ನಡದ ದುಡಿಯುವ ವರ್ಗದ ಹೆಂಗಸರಿಗೆ ಲಭ್ಯವಾದ ಆರ್ಥಿಕ ಸ್ವಾತಂತ್ರ್ಯ ಅದರಿಂದಾಗಿ ಬಂದ ಆತ್ಮವಿಶ್ವಾಸ, ತಲೆ ಸೂಡಿಗೆ ಬೆಳ್ಳಿಯ ಗುಲಾಬಿ ಹೂ ಹಾಕಿಕೊಂಡು ಗತ್ತಿನಿಂದ ನಡೆಯುವ ಧೈರ್ಯವನ್ನು ಒದಗಿಸಿತು. ಆದರೆ ಇದರಿಂದಾಗಿ ಕಿರಿಕಿರಿಗೊಂಡ ಜನಗಳು ಬೀಡಿಕಟ್ಟುವ ಮಹಿಳೆಯರ ಕುರಿತು ಲಘುವಾಗಿ ಮಾತನಾಡ ತೊಡಗಿದ್ದನ್ನೂ, ಬೀಡಿ ಉದ್ಯಮದಿಂದಾಗಿ ಕೃಷಿಕಾರ್ಮಿಕರ ಸಂಖ್ಯೆ ಕಡಿಮೆ ಯಾದುದನ್ನೂ ವಿಶ್ಲೇಷಿಸಿರುವುದರಿಂದ ಈ ಪ್ರಬಂಧಗಳು

ಬರೀ ಪರಿಸರ ಕಥನಗಳಾಗದೆ ಸಾಮಾಜಿಕ-ಆರ್ಥಿಕ, ಅಧ್ಯಯನಗಳ ವ್ಯಾಪ್ತಿಯನ್ನು ಪಡೆದುಕೊಳ್ಳುವಂತೆ ಮಾಡಿದೆ.

ಬಾಲ್ಯದ ವರ್ಣಮಯ ಜಗತ್ತಿಗೆ ಮತ್ತಷ್ಟು ಬಣ್ಣ ಸೇರಿಸುತ್ತಿದ್ದ ಹಬ್ಬಗಳ ಆಚರಣೆ ಬಗ್ಗೆ ಬರೆಯುತ್ತಾ 'ಅಮ್ಮ' ಕಡಲಿನಲ್ಲಿ ಎಳ್ಳಮವಾಸ್ಯೆಯ ದಿನ ಈಜುತ್ತಿದ್ದುದನ್ನು ನೆನಪಿಸಿಕೊಳ್ಳುತ್ತಾರೆ. ನಾಗವೇಣಿಯವರ ಎಲ್ಲ ಪ್ರಬಂಧಗಳಲ್ಲೂ 'ಅಮ್ಮ'ನ ಪ್ರಸ್ತಾಪವಿದೆ.

ದಕ್ಷಿಣ ಕನ್ನಡ ಜಿಲ್ಲೆಯ. ಕರಾವಳಿ ಭಾಗದ ಸಾಮಾಜಿಕ ಸಾಂಸ್ಕೃತಿಕ ರಂಗಗಳಲ್ಲಿ ಕಳೆದ ನಾಲ್ಕೈದು ದಶಕಗಳಲ್ಲಾದ ಸ್ಥಿತ್ಯಂತರಗಳನ್ನು, ಪರಿಸರದ ಬದಲಾವಣೆಗಳನ್ನು ಆಸಕ್ತಿದಾಯಕವಾಗಿ ಚಿತ್ರಿಸುವ ಈ ಪ್ರಬಂಧಗಳು ಕಥೆಗಳಂತೆ ಓದಿಸಿಕೊಳ್ಳುತ್ತವೆ. ಕನ್ನಡದ ಲಲಿತ ಪ್ರಬಂಧ ಪ್ರಕಾರಕ್ಕೆ ಗುರುತ್ವವನ್ನು ದೊರಕಿಸಿಕೊಡುವ, ಒಂದು ಕ್ಷಣ ನಿಂತು ಸುತ್ತಲಿನ ಪರಿಸರ ಕುರಿತು ಯೋಚಿಸುವಂತೆ ಮಾಡುವ ಶಕ್ತಿ ಈ ಪ್ರಬಂದಗಳ ಸ್ತ್ರೀ ಪರಿಸರವಾದೀ ಚಿಂತನೆಗಳಲ್ಲಿ ಇದೆ. ಶಿಷ್ಟ ಸಾಹಿತ್ಯ ಕಡಲನ್ನು, ಸಮುದ್ರ, ಸಾಗರ ಎಂದು ಕರೆದು ಅದರ ಪುರುಷ ಗುಣವನ್ನು ಎತ್ತಿ ಹಿಡಿದರೆ, ನಾಗವೇಣಿ "ಕಡಲಮ್ಮ, ನನ್ನಮ್ಮ" ಎಂದು ಕರೆದು 'ಕಡಲು' ಎಂಬ ಪದವನ್ನೇ ಪುಸ್ತಕದ ಮೊದಲಿಂದ ಕಡೆಯವರೆಗೂ ಪ್ರೀತಿಯಿಂದ ಬಳಸಿದ್ದಾರೆ. 'ಕಡಲ'ನ್ನು ಅದರ ಸ್ತ್ರೀ ಗುಣವನ್ನು ಎತ್ತಿ ಹೇಳುತ್ತಾರೆ. ಸ್ತ್ರೀ ಪರಿಸರವಾದ ಓದಿಗೆ ಒದಗುವ ಪುಸ್ತಕಗಳ ಸಂಖ್ಯೆ ಕನ್ನಡದಲ್ಲಿ ಕಡಿಮೆ. ಅಂತಹ ವಿರಳ ಪುಸ್ತಕಗಳಲ್ಲಿ 'ವಸುಂಧರೆಯ ಗ್ಯಾನ' ಕೂಡ ಸೇರಿದೆ

**ವಸುಂಧರೆಯ ಗ್ಯಾನ**
**(ಪ್ರಬಂಧಗಳ ಸಂಕಲನ)**
**ಲೇಖಕಿ ಡಾ॥ ಎಚ್.ನಾಗವೇಣೀ**
**ವರ್ಷ : 2006,**
**ಲೋಹೀಯಾ ಪ್ರಕಾಶನ,**
**ಬಳ್ಳಾರಿ.**

## ಎರಡು ಲಹರಿಗಳು

ತೆಲುಗು ಮೂಲ: ಡಾ. ರಾವೂರಿ ಭರದ್ವಾಜ

ಅನುವಾದ : ಡಾ.ಎಚ್.ಎಸ್.ಸುಜಾತಾ

ನಮ್ಮಲ್ಲಿ ಬಹಳ ಮಂದಿ ಇದ್ದದ್ದನ್ನು ಇದ್ದಂತೆ ನೋಡಲಾಗದೆ ಹೋಗುತ್ತಾರೆ. ತಮಗೆ ಕಾಣಿಸುತ್ತಿರುವುದರಲ್ಲೇ ತಮಗಿಷ್ಟವಾದ ಅಂಶಗಳನ್ನು ತಮಗೆ ಬೇಕಾದ ಅಂಶಗಳನ್ನು ಅವರು ನೋಡುತ್ತಾರೆ.

ಉದಾಹರಣೆಗೆ ಪೂರ್ಣಿಮೆಯಂದು ಬೆಳದಿಂಗಳನ್ನು ನೋಡಿದಾಗ ಕೆಲವರಿಗೆ ಕ್ಷೀರಸಮುದ್ರ ಕಾಣುತ್ತದೆ. ಮತ್ತೆ ಕೆಲವರಿಗೆ ಬೆಳ್ಳಿಯ ಮಳೆ ಕಾಣುತ್ತದೆ. ಇನ್ನು ಕೆಲವರಿಗೆ ಸಜ್ಜನರ ಮನ ಕಾಣುತ್ತದೆ. ಆ ಬೆಳದಿಂಗಳಲ್ಲೇ ಕೆಲವರು ದಯಾಮಯರ ದರಹಾಸಗಳನ್ನು ಕಾಣುತ್ತಾರೆ. ಮತ್ತೆ ಕೆಲವರು ದೇವತೆಗಳ ಕ್ರೀಡಾಂಗಣವನ್ನು ಕಾಣುತ್ತಾರೆ. ಇನ್ನು ಕೆಲವರು ಅವರಿಗಿಷ್ಟವಾದವುಗಳನ್ನು ಕಾಣುತ್ತಾರೆ.

ಹಾಗಲ್ಲದೆ ಬೆಳದಿಂಗಳಲ್ಲಿ ಕೇವಲ ಬೆಳದಿಂಗಳನ್ನು ಮಾತ್ರವೇ ಕಾಣಬಲ್ಲವರು ಸತ್ಯದರ್ಶಕರಾಗುತ್ತಾರೆ.

* * *

"ಈ ಅಂಶವನ್ನು ಕುರಿತು ನಿಮ್ಮ ಅಭಿಪ್ರಾಯವೇನು? ಇದನ್ನು ಕುರಿತು ನೀವು ಏನೆಂದುಕೊಳ್ಳುತ್ತಿದ್ದೀರಿ?" ಎಂದೆ ನನ್ನ ಸಂದೇಹಗಳನ್ನು ಅವರ ಮುಂದೆ ಹರಡುತ್ತ.

ಅವರು ಒಂದು ಕ್ಷಣ ನನ್ನ ಕಡೆ ನೋಡಿದರು. ಮತ್ತೊಂದು ಕ್ಷಣ ಇನ್ನೆಲ್ಲೋ ನೋಡುತ್ತ ತಲೆ ಅಲ್ಲಾಡಿಸಿದರು. ಆ ತರುವಾಯ ಸಣ್ಣಗೆ ನಿಟ್ಟುಸಿರು ಬಿಟ್ಟರು.

"ಒಬ್ಬ ಕುಂಟ ಮತ್ತೊಬ್ಬನಿಗೆ ನಡೆಯುವುದನ್ನು ಕಲಿಸಲಾರ. ಒಬ್ಬ ಮೂಕ ಇನ್ನೊಬ್ಬನಿಗೆ ಮಾತನಾಡುವುದನ್ನು ಕಲಿಸಲಾರ. ಒಬ್ಬ ಕುರುಡ ಬೇರೊಬ್ಬನಿಗೆ ದಾರಿಯನ್ನು ತೋರಿಸಲಾರ. ಹಾಗೆಯೇ ತನ್ನ ಅಗತ್ಯಗಳಿಗೋಸ್ಕರ ಬೇರೆಯವರ ಮೇಲೆ ಆಧಾರ ಪಡುವವರು ಇತರರಿಗೆ ಎಷ್ಟು ಮಾತ್ರವೂ ಸಹಾಯ ಮಾಡಲಾರರು. ಈ ವಿಧವಾಗಿ ನಾನು ಕುಂಟ, ನಾನು ಮೂಕ, ನಾನು ಕುರುಡ. ನಾನು ನನ್ನ ಅಗತ್ಯಗಳಿಗಾಗಿಯೇ ಅವರಿವರನ್ನು ಬೇಡಿಕೊಳ್ಳುತ್ತಿದ್ದೇನೆ. ಅವರಿವರನ್ನು ಅವಲಂಬಿಸಿದ್ದೇನೆ. ಅವರು ನನಗೆ ಏನೂ ಸಹಾಯ ಮಾಡಿಲ್ಲ ಎಂದಲ್ಲ. ಆದರೆ ಅವರು ದಯಪಾಲಿಸುವುದು ನನ್ನ ಅಗತ್ಯಗಳಿಗೆ ಸಾಕಾಗದು. ಆದ್ದರಿಂದ ನನಗೆ ಬೇಕಾದವುಗಳಿಗೋಸ್ಕರ ನಾನೇ ತೊಂದರೆ ಪಡುತ್ತಿದ್ದೇನೆ" ಎಂದರು ಅವರು.

ಯಾರೋ ನನ್ನನ್ನು ಹಿಡಿದಲುಗಿಸಿದಂತೆ ಆಯಿತು.

ನಾನು ಮಾಡಬೇಕಾದ್ದನ್ನು ನಾನು ಒಪ್ಪುವ ಹಾಗೆ ಭೋಧಿಸಿದ ಆ ಉತ್ತಮನಿಗೆ ತಾದಾಭಿವಂದನೆ ಮಾಡಿದೆ.

# ಮರೆಯಬಾರದ
# ಲೇಖಕಿ ಕೊಡಗಿನ ಗೌರಮ್ಮ

- ಡಾ|| ಎಂ.ಎಸ್. ಆಶಾದೇವಿ

ಹಲವು ಕಾರಣಗಳಿಗೆ ಕೊಡಗಿನ ಗೌರಮ್ಮ ಕನ್ನಡದ ಮುಖ್ಯ ಮಾತ್ರವಲ್ಲದೆ ನಿಜವಾದ ಅರ್ಥದಲ್ಲಿ ವಿಶಿಷ್ಟ ಲೇಖಕಿಯಾಗಿ ಕಾಣಿಸುತ್ತಾರೆ. ಇವರ ಕಥೆಗಳನ್ನು ಮೂಲಭೂತವಾಗಿ ಎರಡು ನೆಲೆಗಳಲ್ಲಿ ಚರ್ಚಿಸುವುದು ಸಾಧ್ಯ ಎಂದು ನಾನು ತಿಳಿದಿದ್ದೇನೆ.

ಒಂದು, ಒಟ್ಟು ಕನ್ನಡ ಕಥಾ ಪರಂಪರೆಯ ಹಿನ್ನೆಲೆಯಲ್ಲಿ ಅವರ ಕಥೆಗಳನ್ನು ಚರ್ಚಿಸುವುದು, ಇನ್ನೊಂದು ಸ್ತ್ರೀವಾದಿ ಅಧ್ಯಯನ ಮಾದರಿಯಲ್ಲಿ ಅವರ ಕಥೆಗಳ ಚರ್ಚೆ. ಆದರೆ, ಈ ಎರಡೂ ಅಧ್ಯಯನ ಮಾದರಿಗಳಲ್ಲದೆ, ಇನ್ನೊಂದು ಮುಖ್ಯವಾದ ಪ್ರವೇಶ ಇವರ ಕಥೆಗಳಿಗೆ ಸಾಧ್ಯ ಎನ್ನುವುದು ಇಂದು ನಾನು ಕಟ್ಟಲು ಪ್ರಯತ್ನಿಸುತ್ತಿರುವ ಪ್ರಮೇಯ.

ಅದು ಅವರ ಒಟ್ಟೂ ಕಥೆಗಳಿಗೆ ಗಾಂದೀ ಚಿಂತನೆಯ ದಟ್ಟವಾದ ಹಿನ್ನೆಲೆ ಇದೆ ಎನ್ನುವುದು. ಅವರ ಕಥಾ ಭಿತ್ತಿಯನ್ನು ನಿರ್ಧರಿಸಿರುವುದು ಮತ್ತು ನಿರ್ದೇಶಿಸಿರುವುದು ಗಾಂಧೀ ವಿಚಾರಗಳೇ ಅನ್ನುವುದು. ಸರಳವಾಗಿ ಈ ಅಂಶವನ್ನು ಸೂತ್ರ ರೂಪದಲ್ಲಿ ಹೇಳಬೇಕು ಅಂದರೆ ಗಾಂಧಿ ಕಲ್ಪನೆಯ ಕಲ್ಯಾಣ ರಾಜ್ಯ ಏನಿದೆ, ಅದರ ನಿರೀಕ್ಷೆ ಮತ್ತು ಅದಕ್ಕಿರುವ ತೊಡಕುಗಳನ್ನು ಇವರ ಕಥೆಗಳ ಮೂಲ ವಸ್ತುವಾಗಿ ನೋಡಬಹುದೇ? ಮೊದಲಿಗೆ ಇವರ ಕಥೆಗಳಿಗಿರುವ ಎರಡು ನೆಲೆಗಳನ್ನು ಗುರುತಿಸಿಕೊಂಡು ಅದರ ಬಗ್ಗೆ ಸ್ವಲ್ಪ ಹೇಳಬಹುದು. ಕನ್ನಡದ ಸಣ್ಣ ಕಥೆಗಳನ್ನು ಅಧ್ಯಯನ ಮಾಡುವುದು ಅಂದರೇನೇ, ವಿವಿಧ ಕಾಲಘಟ್ಟಗಳಲ್ಲಿ ನಡೆದ ಸಾಮಾಜಿಕ ಹೋರಾಟದ, ಪಲ್ಲಟಗಳ, ಬಿಕ್ಕಟ್ಟುಗಳ ಅಧ್ಯಯನ ಅನ್ನುವಷ್ಟು ಅದು ತನ್ನ ರೂಪದಲ್ಲಿ, ಆಶಯದಲ್ಲಿ ಸಮಾಜಮುಖಿಯಾದದ್ದು. ಕೆಲವು ಅಪ್ಪಟ ನವ್ಯ ಕಥೆಗಳನ್ನು ಬಿಟ್ಟರೆ ಕನ್ನಡದ ಬಹುಪಾಲು ಸಣ್ಣ ಕಥೆಗಳು ಖಂಡಿತವಾಗಿಯೂ ಸಮಾಜಮುಖಿ ಆಯಾಮವನ್ನು ಹೊಂದಿರುವಂಥವೇ ಎಂಬುದರಲ್ಲಿ ಅನುಮಾನವೇ ಇಲ್ಲ. ಕಾವ್ಯಕ್ಕಿಂತ ಭಿನ್ನವಾಗಿ ಇದು ಸೋದ್ದಿಶ್ಯವಾದ, ಅಪ್ರತಿಮ ಕಥೆಗಾರಿಕೆಯ ಜೊತೆಯಲ್ಲಿ ಪ್ರಜ್ಞಾಪೂರ್ವಕವಾದ ಉದ್ದೇಶಗಳನ್ನು, ಗುರಿಯನ್ನು ಇಟ್ಟುಕೊಂಡ ಸಾಹಿತ್ಯ ಪ್ರಕಾರ ಇದು. (ಕಾದಂಬರಿಯ ಮಟ್ಟಿಗೂ ಈ ಮಾತನ್ನು ಹೇಳಬಹುದು) ಆರಂಭದಲ್ಲಿ ಮೈನರ್ ಸಾಹಿತ್ಯಪ್ರಕಾರವಾಗಿ ಕಾಣಿಸಿಕೊಂಡಿದ್ದ ಸಣ್ಣ ಕಥೆಗಳು ಬಹುಬೇಗ ಮೇಜರ್ ಸಾಹಿತ್ಯ ಪ್ರಕಾರದ ಸ್ಥಾನವನ್ನು ಪಡೆದುಕೊಂಡಿದ್ದು ಪ್ರಧಾನವಾಗಿ ಈ ಕಾರಣಕ್ಕಾಗಿ. ಒಂದು ರೀತಿಯಲ್ಲಿ ಸಣ್ಣಕತೆ ಎನ್ನುವುದು ಜನಪರ ಸಾಹಿತ್ಯ ಪ್ರಕಾರವಾಗಿ ರೂಪುಗೊಂಡಿದೆ ಅಂದರೂ ನಡೆಯುತ್ತದೆ. ಏಕೆಂದರೆ ಇತರೆಲ್ಲ ಸಾಹಿತ್ಯ ಪ್ರಕಾರಗಳಿಗಿಂತ ಜನಪರ ಕಾಳಜಿಗಳು ತುಂಬಾ ಸ್ಪಷ್ಟವಾಗಿ ಅದರೆಲ್ಲ ತೀವ್ರತೆಯೊಂದಿಗೆ ಅಭಿವ್ಯಕ್ತಗೊಂಡಿದ್ದು ಈ ಪ್ರಕಾರದಲ್ಲಿ. ತಲೆಮಾರಿನ ತಳಮಳಗಳು ನಿರೀಕ್ಷೆಗಳು, ಆಸೆಗಳು, ಕನಸುಗಳು ಸಣ್ಣಕಥೆಗಳಲ್ಲಿ ಕಾಣಿಸಿಕೊಂಡಷ್ಟು ಪ್ರಖರವಾಗಿ, ಸ್ಪಷ್ಟವಾಗಿ ಇನ್ನಿತರ ಸಾಹಿತ್ಯ ಪ್ರಕಾರಗಳಲ್ಲಿ ಕಾಣಿಸಿಕೊಂಡಿರುವುದು ಕಡಿಮೆಯೇ. ಇಂತಹ ಸೋದ್ದಿಶ್ಯವಾದ ಈ ಪ್ರಕಾರ ರಸಾನುಭವದ ಜೊತೆ ಭಿನ್ನವಾದ ಸಾಹಿತ್ಯದ ಸಾಮಾಜಿಕ ಹೊಣೆಗಾರಿಕೆಯನ್ನು ತನ್ನ ನಿರೀಕ್ಷೆಯ ಹಾಗೆ ಅಪಾರ ಸಂಖ್ಯೆಯ ಓದುಗರನ್ನು ಪಡೆದುಕೊಂಡಿದೆ ಅನ್ನುವುದು ನನ್ನ ಮಾತಿಗಿರುವ ಇನ್ನೊಂದು ಸಮರ್ಥನೆ. ಚೂರು ಧೈರ್ಯ ಮಾಡಿ ಹೇಳಿಬಿಡಬಹುದಾದರೆ ನಿಜವಾದ ಅರ್ಥದಲ್ಲಿ Mass media ಆಗುವ ಶಕ್ತಿ ಸಾಧ್ಯತೆಗಳನ್ನು ಹೊಂದಿರುವ ಪ್ರಕಾರದು. ಈ ಎಲ್ಲಾ ಮಾತುಗಳನ್ನು ಹೇಳುತ್ತಾ ಇರುವಾಗ ತನ್ನ ಸಾಮಾಜಿಕ ಆಶಯಗಳನ್ನು ಕಾವ್ಯದಲ್ಲಿಯೂ ಶಕ್ತವಾಗಿ ಅಭಿವ್ಯಕ್ತಿಸಿದ ದಲಿತ ಕಾವ್ಯವನ್ನು ಅದರ ಮಹತ್ವ ಮತ್ತು ಪ್ರಭಾವವನ್ನು ನಾನು ನಿರಾಕರಿಸುತ್ತಿಲ್ಲ. ಪ್ರಶ್ನಿಸುತ್ತಿಲ್ಲ ಎನ್ನುವುದನ್ನು ಇಲ್ಲಿಯೇ ಸ್ಪಷ್ಟಪಡಿಸಬೇಕು. ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದೊಳಗೆ ನವೋದಯದಿಂದ ಇಲ್ಲಿನ ತನಕ ಏಕಪ್ರಕಾರದ ಜನಪ್ರೀತಿಯನ್ನು ಹೆಚ್ಚಿಸಿಕೊಂಡ ಸಾಹಿತ್ಯ ಪ್ರಕಾರ ಇದು ಅನ್ನುವುದರ ಕಡೆಗೆ ನನ್ನ ಒತ್ತು ಇದೆ.

ಕೊಡಗಿನ ಗೌರಮ್ಮನವರು ಮೂಲತಃ ಸಮಾಜಮುಖಿ, ಸಮಷ್ಠಿ ಪ್ರಜ್ಞೆಯ ಲೇಖಕಿ. ಈ ಕಾರಣಕ್ಕಾಗಿಯೆ 'ಸಾಮಾಜಿಕ ಸ್ವರೂಪ' ಅವರ ಕಥೆಗಳಲ್ಲಿ ಪ್ರಧಾನವಾಗಿ ಕಾಣಿಸಿಕೊಳ್ಳುತ್ತದೆ. ಎರಡನೆಯದು ಸ್ತ್ರೀವಾದಿ ಚಿಂತನೆಗಳ ಇವತ್ತಿನ ಪ್ರಧಾನ ಕಾಳಜಿ ಮತ್ತು ಪ್ರಯತ್ನಗಳು ಮುಖ್ಯವಾಗಿ ಎರಡು ನೆಲೆಗಳಲ್ಲಿ ನಡೆಯುತ್ತಿದೆ. ಮೊದಲನೆಯದು ಮೂಲ ಸ್ತ್ರೀವಾದದ (native feminism) ಹುಡುಕಾಟ. ಇದನ್ನು ಅದಿಮ ಸ್ತ್ರೀವಾದದ ಹುಡುಕಾಟ ಎಂದು ಕರೆಯಬಹುದು. ಸ್ತ್ರೀವಾದದ ಮೂಲನೆಲೆಗಳನ್ನು ಕಟ್ಟಿಕೊಳ್ಳುವುದು. ಇಂಥ ಮೂಲ ನೆಲೆಗಳನ್ನು ಗುರುತಿಸುವುದರ ಮೂಲಕವೇ ಸ್ತ್ರೀವಾದಿ ಹೋರಾಟ ಅನ್ನುವುದು ಅನಾದಿ ಮತ್ತು ಆದಿಮ ಅನ್ನುವುದನ್ನು ಸ್ಪಷ್ಟಪಡಿಸುತ್ತದೆ. 'ಸ್ವ ಪ್ರಜ್ಞೆ'ಯ ಹೆಣ್ಣು ಎಂದಿನಿಂದಲೂ ಇದ್ದಾಳೆ ಎನ್ನುವುದನ್ನು ಅವರ ಹೋರಾಟಗಳು ತಮ್ಮದೇ ಆದ ಮೂರ್ತ-ಅಮೂರ್ತ ರೂಪಗಳಲ್ಲಿ, ಸಣ್ಣ ಗೆಲುವಿನಲ್ಲಿ ಮತ್ತು ದೊಡ್ಡ ಸೋಲಿನಲ್ಲಿ

ಕಾಣಿಸಿಕೊಂಡಿದ್ದೇನಿದೆ ಅವುಗಳನ್ನು ಗುರುತಿಸಿಕೊಳ್ಳುವ ಪ್ರಯತ್ನ. ಈ ಪ್ರಯತ್ನ ಹಿಂದಿನ ಸ್ತ್ರೀವಾದಿ ಹೋರಾಟದಲ್ಲಿ ಇರಲಿಲ್ಲ ಎಂದಲ್ಲ. ಆದರೆ ಈಗ ಅದು ಪಡೆದುಕೊಂಡಷ್ಟು ಚಾಲ್ತಿಯನ್ನು, ವೇಗವನ್ನು ಅದು ಪಡೆದುಕೊಂಡಿರಲಿಲ್ಲ. ಇಂದಿನ ಸ್ತ್ರೀವಾದಿ ಹೋರಾಟದ ಇನ್ನೊಂದು ನೆಲೆಯೆಂದರೆ, ಪ್ರತಿಯೊಂದು ಸಮುದಾಯವೂ ತನಗೆ ವಿಶಿಷ್ಟವಾದ ತನ್ನ ಕಾಲ, ಪರಿಸರಕ್ಕೆ ಅಗತ್ಯವಾದ ಹೋರಾಟದ ದಾರಿಗಳನ್ನು ಕಂಡಕೊಳ್ಳಬಹುದು ಎನ್ನುವುದು. ಸ್ತ್ರೀವಾದಿ ಹೋರಾಟಕ್ಕೆ ಸಾರ್ವತ್ರಿಕವಾದ ನಿರ್ದಿಷ್ಟ ಮಾದರಿಗಳು ಇರುವುದಕ್ಕೆ ಸಾಧ್ಯವಿಲ್ಲ ಎನ್ನುವ ಹೊಸ ನಂಬಿಕೆಯಿಂದ ಹೊರಟ ಚಿಂತನೆ ಇದು. ಹೆಣ್ಣಿನ ಸಮಸ್ಯೆಗಳಲ್ಲಿ ಏಕರೂಪತೆ ಇದೆಯೆ ಹೊರತು ಪರಿಹಾರಗಳಲ್ಲಿ ಏಕರೂಪತೆ ಇಲ್ಲ ಎನ್ನುವುದು ಸಮಕಾಲೀನ ಸ್ತ್ರೀವಾದಿ ಚಿಂತನೆಗಳ ಮುಖ್ಯ ಅಂಶ. ಈ ಹಿನ್ನೆಲೆಯಲ್ಲಿ ಕೊಡಗಿನ ಗೌರಮ್ಮನವರನ್ನು ಚರ್ಚೆ ಮಾಡುವುದಕ್ಕೆ ಆಗುವುದಿಲ್ಲ ನಿಜ. ಆದರೆ ಸ್ತ್ರೀವಾದದ ಇತ್ತೀಚಿನ ಬೆಳವಣಿಗೆಗಳ ಬಗ್ಗೆ ಸ್ವಲ್ಪ ಹೇಳಬೇಕು ಎನ್ನು ಕಾರಣಕ್ಕೆ ಈ ಮಾತುಗಳನ್ನು ಹೇಳಬೇಕಾಯಿತು.

ಕೊಡಗಿನ ಗೌರಮ್ಮನವರನ್ನು ಮೂಲತಃ ಚರ್ಚಿಸುವುದಕ್ಕೆ ಸಾಧ್ಯವಾಗುವುದು ಸುಧಾರಣಾವಾದಿ ಸ್ತ್ರೀವಾದದ ನೆಲೆಯಲ್ಲಿ. ಆದರೆ ಇವತ್ತಿನ ಸ್ತ್ರೀವಾದಿಗಳು ಸುಧಾರಣಾವಾದದಲ್ಲಿ ನಂಬಿಕೆಯನ್ನು ಕಳೆದುಕೊಂಡಿದ್ದಾರೆ. ಅವರ ಗಮನ ಇರುವುದು ನಿರ್ದಿಷ್ಟ ಬದಲಾವಣೆಯ ಮಾದರಿಯಲ್ಲಿ. ಸುಧಾರಣೆ ಎನ್ನುವುದು ಒಂದು ಹಂತದವರೆಗೆ ಮಾತ್ರ, ಅದರಲ್ಲೂ ಬಹುತೇಕ ಸಂದರ್ಭದಲ್ಲಿ ಮೇಲ್ತೋರಿಕೆಯ ಬದಲಾವಣೆಯನ್ನು ಮಾತ್ರ ತರುತ್ತದೆ. ಸುಧಾರಣೆ ಗ್ರಹಿಕೆಯ ಬದಲಾವಣೆಯನ್ನು ಮಾತ್ರ ತರಬಲ್ಲದೇ ಹೊರತು ಸಂವೇದನೆಯ ಬದಲಾವಣೆಯನ್ನಲ್ಲ ಅನ್ನುವ ಕಾರಣಕ್ಕೆ. ಮೂಲತಃ ಗೌರಮ್ಮ ನವರನ್ನು ನಾವು ಯಾವುದನ್ನು ನವೋದಯದ ಸಂದರ್ಭದಲ್ಲಿ ಪುನರುಜ್ಜೀವನದ ಮಾದರಿ ಎಂದು ಕರೆಯುತ್ತೇವೋ ಆ ಪುನರುಜ್ಜೀವನದ ಆಶಯಗಳಲ್ಲಿ ಇಟ್ಟು ಚರ್ಚಿಸಬಹುದು. ಅದು ವಿಧವಾ ವಿವಾಹ ಇರಬಹುದು, ಹೆಣ್ಣಿಗೆ ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಸ್ವಾತಂತ್ರ್ಯ ಸಿಗಬೇಕು ಎಂಬುದಿರಬಹುದು, ಜಾತಿ ಧರ್ಮಗಳ ಚೌಕಟ್ಟಿನಿಂದ ಹೊರಬರಬೇಕು ಅನ್ನುವುದಿರಬಹುದು, ಗಂಡು-ಹೆಣ್ಣಿನ ಸಂಬಂಧವನ್ನು ಪರಸ್ಪರ ಗೌರವದ ಪಾತಳಿಯಲ್ಲಿ ನೋಡಬೇಕು ಎನ್ನುವುದಿರಬಹುದು.

ನವೋದಯದ ಎಲ್ಲಾ ಪ್ರಮುಖ ಲೇಖಕರಲ್ಲಿಯೂ ಈ ಆಶಯಗಳನ್ನು ನಾವು ಗುರುತಿಸಬಹುದು ಅನ್ನುವುದು ನಿಜ. ಆದರೆ ಗೌರಮ್ಮನವರ ಬರವಣಿಗೆಗಳಲ್ಲಿ ಕಾಣಿಸಿಕೊಳ್ಳುವ ಈ ಪುನರುಜ್ಜೀವನ್ ಮಾದರಿಯ ರೂಪುರೇಷೆಗಳನ್ನು ನಿರ್ಧರಿಸುವುದು ಗಾಂಧಿ ಗ್ರಹಿಕೆಯ ದೃಷ್ಟಿಕೋನ ಅನ್ನುವುದು ನನಗೆ ತುಂಬ ಮುಖ್ಯವಾಗಿ ಕಾಣಿಸುತ್ತದೆ.

ಗಾಂಧಿಯವರ ವಿಚಾರಗಳು ಗೌರಮ್ಮನವರ ಕಥಾ ಬಿತ್ತಿಯನ್ನು ನಿರ್ಧರಿಸಿವೆ ಮತ್ತು ನಿರ್ದೇಶಿಸಿವೆ. ಒಂದು ಕಲ್ಯಾಣ ರಾಜ್ಯದ ನಿರೀಕ್ಷೆ, ಅಪೇಕ್ಷೆ ಮತ್ತು ಅದಕ್ಕಿರುವ ತೊಡಕುಗಳು ಇವರ ಕಥೆಗಳಲ್ಲಿ ಮತ್ತೆ ಮತ್ತೆ ಪುನರಾವರ್ತಿತವಾಗುತ್ತವೆ. ಗಾಂಧಿಯ ಪ್ರಭಾವ ನಮ್ಮ ಎಲ್ಲ ಪ್ರಮುಖ ಲೇಖಕರ ಮೇಲೆ ಒಂದಲ್ಲ ಒಂದು ರೀತಿಯಲ್ಲಿ ಆಗಿಯೇ ಇದೆ ಎನ್ನುವುದು ನಿಜ. ಆದರೆ ಅವರ ಸಾಹಿತ್ಯದ ಸ್ವರೂಪವನ್ನೇ ಆಳವಾಗಿ ಗಾಂಧಿಯ ವಿಚಾರಗಳು ರೂಪಿಸಿರುವುದು ಗೌರಮ್ಮನವರಲ್ಲಿ ಮಾತ್ರ ಎಂದು ನನಗನ್ನಿಸುತ್ತದೆ. ಅದರಲ್ಲೂ ಲೇಖಕಿಯರ ಮೇಲಿನ ಗಾಂಧೀಜಿಯವರ ಪ್ರಭಾವಕ್ಕೆ ನವೋದಯದಲ್ಲಿ ಒಂದು ಪರಂಪರೆಯೇ ಇದೆ. ಕಲ್ಯಾಣಮ್ಮನವರಲ್ಲಿ, ಶಾಮಲಾ ದೇವಿಯವರಲ್ಲಿ ಗಾಂಧೀಜಿಯ ಪ್ರಭಾವನ್ನು ನಾವು ಗುರುತಿಸುವುದಕ್ಕೆ ಸಾಧ್ಯವಿದೆ. ಆದರೆ ಅದರೆ ತುತ್ತ ತುದಿಯಾಗಿ ಕಾಣಿಸುವುದು ಮಾತ್ರ ಗೌರಮ್ಮನವರೇ. ಇಲ್ಲಿ ಗಾಂಧಿವಾದದ ಚರ್ಚೆಗೆ ನಾವು ಹೋಗಬೇಕಾಗಿಲ್ಲವೇನೋ. ಗಾಂಧೀ ಪ್ರಣೀತ ಪರಿಕಲ್ಪನೆ ಏನಿದೆ ಅದರ ಜೊತೆಗೆ ಗೌರಮ್ಮನವರಿಗೆ ಸಂಪೂರ್ಣವಾದ ಸಹಮತವಿದೆ.

ಇಂದು ಗಾಂಧೀ ವಿಚಾರಗಳನ್ನು ತೀವ್ರವಾದ ಮರುಪರಿಶೀಲನೆಗೆ ನಾವು ಒಡ್ಡಿರುವಾಗ ಗಾಂದಿವಾದವನ್ನು ಕುರಿತ ನಮ್ಮ ದ್ರಷ್ಟಿಕೋನದ ಹಿನ್ನೆಲೆಯಲ್ಲಯೇ ಗೌರಮ್ಮನವರ ಕಥೆಗಳಲ್ಲಿ ನಮಗೆ ಅನೇಕ ಸಮಸ್ಯೆಗಳು ಕಾಣಿಸಬಹುದು. ಆದರೆ ಅವರ ಕಥೆಗಳನ್ನು ಓದಿದ ಯಾರ ಅನುಭವಕ್ಕೂ ತಟ್ಟನೆ ಬರುವುದು ಅಂದರೆ She is a convinced Gandhian ಅನ್ನುವುದು. ಗಾಂಧಿವಾದದ ಮುಖ್ಯ ಲಕ್ಷಣಗಳು ಸಮಸ್ಯೆಗಳನ್ನು ಕುರಿತ ಸಹಾನುಭೂತಿ ಆಳವಾದ ಸ್ಪಂದನೆ, ಆತ್ಮ ವಿಮರ್ಶೆ ಅದಕ್ಕೆ ಪರಿಹಾರದ ಹುಡುಕಾಟ ಅಂತರಂಗದ ಬದಲಾವಣೆ ಹೀಗೆ ಗಾಂಧಿ ವಿಚಾರಗಳೇ ಇವರ ಪರಿಹಾರದ ಅಂತರಂಗದ. ಬದಲಾವಣೆ ಹೀಗೆ ಗಾಂಧಿ ವಿಚಾರಗಳೆ ಇವರ ಕೈ ಹಿಡಿದು ನಡೆಸಿರುವುದರಿಂದ ಆಗಿರುವ ಬಹಳ ದೊಡ್ಡ ಲಾಭ ಎಂದರೆ ಅವರ ಕಥೆಗಳಿಗೆ ದೊರೆತಿರುವ ದೊಡ್ಡ ಹರವು. ಆ ಕಾಲದ ಇತರ ಲೇಖಕಿಯರಿಗಿಂತ ಗೌರಮ್ಮ ನಿರ್ಣಾಯಕವಾಗಿ ಭಿನ್ನವಾಗುವುದು ಮೂಲತಃ ಈ ಕಾರಣಕ್ಕೆ. ಮನುವಿನ ರಾಣಿಯಂತಹ ಒಂದು outstanding ಕಥೆಯನ್ನು ಇವರು ಬರೆಯುವುದಕ್ಕೆ ಸಾಧ್ಯವಾಯಿತು ನೋಡಿ. ಆ ಕತೆಯ

ಶಿರ್ಷಿಕೆಯನ್ನೇ ನೋಡಿ ಮನುವಿನ ರಾಣಿ ಆಕೆ ಒಬ್ಬ ವೇಶ್ಯೆ –ರಾಜಮ್ಮ ಅಂತ ಅವಳ ಹೆಸರು. ಆಕೆ ಒಬ್ಬನನ್ನು ಪ್ರೀತಿಸಿ, ಆತನೂ ಆಕೆಯನ್ನು ಪ್ರೀತಿಸುತ್ತಾನೆ. ಆದರೆ ಯಥಾ ಪ್ರಕಾರ ಆಕೆಯ ತಾಯಿ ಆ ಸಂಬಂಧವನ್ನು ತಪ್ಪಿಸುತ್ತಾಳೆ. ಆದರೆ ಕೊನೆಗೂ ಅವರಿಬ್ಬರೂ ಒಂದುಗೂಡುತ್ತಾರೆ. ಕಾಡುವ ಪ್ರೀತಿಯು ಸಾಕ್ಷಾತ್ಕಾರವಾಗಿ ಮಾತ್ರ ಕಥೆಯಲ್ಲಿ ಪ್ರತಿಪಾದಿತವಾಗಿಲ್ಲ. ವೇಶ್ಯೆಯ ಬದಲಾಗಬೇಕಾದ ಬದುಕು, ಅವರನ್ನು ನೋಡುವ ಸಮಾಜದ ದೃಷ್ಟಿಕೋನದಲ್ಲಿ ಆಗಬೇಕಾಗಿರುವ ಬದಲಾವಣೆಗೂ ಈ ಕಥೆಯಲ್ಲಿ ಅಷ್ಟೇ ಒತ್ತು ಸಿಕ್ಕಿದೆ ಅನ್ನುವುದೆ ಕಥೆಯನ್ನು ವಿಶಿಷ್ಟವಾಗಿ ಮಾಡುತ್ತದೆ.

'ಅವಳ ಭಾಗ್ಯ' ಇನ್ನೊಂದು ಮುಖ್ಯ ಕಥೆ. ಈ ಕಥೆಯಲ್ಲಿ ಬರುವವಳು ಒಬ್ಬಳು ಕುರೂಪಿಯಾದ ಹುಡುಗಿ. ಸಾಲದ್ದಕ್ಕೆ ಬಡವರ ಮನೆಯ ಹುಡುಗಿ ಬೇರೆ. ಆ ಕುರೂಪಿ ಹುಡುಗಿಯಲ್ಲಿ ಗೌರಮ್ಮನವರಿಗೆ ಕಾಣಿಸುವುದು ಆಕೆಯ ಆತ್ಮದ ಸೌಂದರ್ಯ, ಆಕೆಯ ವ್ಯಕ್ತಿತ್ವದ ಸೌಂದರ್ಯ. ಒಳ್ಳೆಯ ಕಂಠ ಇರುವ ಹಾಡುವ ಹಾಡುಗಳಾದರೂ ಎಂತಹವು ಎಂದರೆ ಪರಮಾತ್ಮಾ ಹರೆ, ಪಾವನ ನಾಮ, ನಾನ್ಯಾಕೆ ಬಡವನಯ್ಯ ಎನ್ನುವ ರೀತಿಯವು. ಆ ಹುಡುಗಿ ಹಾಡುವ ಈ ಹಾಡುಗಳೇ ಗಾಂಧಿಯನ್ನು ನಮ್ಮ ನೆನೆಪಿಗೆ ತರುತ್ತವೆ. ಗಾಂಧಿ ಅವಮಾನವನ್ನು ಗೆಲ್ಲಲು ಹುಡುಕಿದ ದಾರಿಗಳಲ್ಲಿ ಇದೊಂದು ಎನ್ನುವುದನ್ನು ನಾನು ವಿವರಿಸ ಬೇಕಿಲ್ಲ.

ನನಗೆ ತುಂಬ ಮುಖ್ಯವಾಗಿ ಕಾಣುವ ಇನ್ನೊಂದು ಮುಖ್ಯ ಅಂಶವೆಂದರೆ ಸಮಾಜದ ಎಲ್ಲಸಮಸ್ಯೆ ಗಳನ್ನು ಮುಖಾಮುಖಿಯಾಗುವಾಗಲೂ ಗೌರಮ್ಮನವರಿಗೆ ಸಾಧಿಸಿರುವ ಸಂಯಮ. ಕಹಿ ಇಲ್ಲದ, ಆಕ್ರೋಶವಿಲ್ಲದ, ವ್ಯಗ್ರತೆ ಇಲ್ಲದ ಅವರ ನಿರುದ್ವಿಗ್ನವಾದ ನಿರೂಪಣೆ. ಈ ಸಂಯಮದಿಂದಾಗಿ ಅವರು ಅತಿರಂಜಕತೆ ಮತ್ತು ಅತಿ ಭಾವುಕತೆಯ ಅಪಾಯದಿಂದ ಪಾರಾಗಿದ್ದಾರೆ. ಒಂದು ಸಾಮಾಜಿಕ ಪಲ್ಲಟದ ಆರಂಭದ ದಿನಗಳಲ್ಲಿ ಬರೆದ ಗೌರಮ್ಮನವರಿಗೆ ಸಿದ್ಧಿಸಿರುವ ಈ ಬಗೆಯ ನಿರುದ್ವಿಗ್ನತೆ ನಿಜಕ್ಕೂ ಆಶ್ಚರ್ಯ ಹುಟ್ಟಿಸುತ್ತದೆ. ಸೂತ್ರ ರೂಪಗಳಲ್ಲಿ ಕಥೆಗಳಲ್ಲಿ ಆಗಾಗ ಕಾಣಿಸಿಕೊಳ್ಳುವ ಮಾತುಗಳು ಕಥೆಗಳ ಒಟ್ಟೂ ಕಲಾತ್ಮಕತೆಗೆ ಧಕ್ಕೆ ತರುತ್ತವೆ ಎನ್ನುವುದು ನಿಜ. ಆದರೆ ಯಾವ ಕಾರಣಕ್ಕೂ ಅವು ಹುಸಿ ಭಾವುಕತೆಯ ಮಾತುಗಳಾಗದ ಎಚ್ಚರವನ್ನು ಲೇಖಕಿ ಉದ್ದಕ್ಕೂ ವಹಿಸುತ್ತಾರೆ.

ಎಲ್ಲ ಕಾಲಕ್ಕೂ ಲೇಖಕಿಯರ ಮೇಲೆ ಇರುವ ಒಂದು ಪ್ರಧಾನ ಆರೋಪವೆಂದರೆ ಅವು ಕೌಟುಂಬಿಕ ಸಂಬಂಧಗಳ ಸುತ್ತಲೇ ಗಿರಕಿ ಹೊಡೆಯುತ್ತಾರೆ ಎನ್ನುವುದು (ಆಧುನಿಕ ಸ್ತ್ರೀವಾದ ಈ ಅಂಶವನ್ನು ತೀವ್ರವಾಗಿ ವಿರೋಧಿಸುತ್ತದೆ. ಕೌಟುಂಬಿಕ ಸಂಬಂಧಗಳಾಗಲೀ, ಸ್ತ್ರೀ ವಿಶೇಷ ಎಂದು ಗುರುತಿಸುವ ಇತರ ಅನುಭವಗಳಾಗಲೀ ಅನುಭವದ ಸಾಂದ್ರತೆ ಮತ್ತು ತೀವ್ರತೆಯೊಂದಿಗೆ ಪ್ರಕಟವಾಗುವಾಗ ಪುರುಷಲೋಕದ ಮತ್ಯಾವುದೇ ಅನುಭವ ವಿಶೇಷಕ್ಕಿಂತ ಕಡಿಮೆಯಾಗಬೇಕಾದಿಲ್ಲ.) ಗೌರಮ್ಮನವರು ತಮ್ಮ ಅನುಭವದ ಮಿತಿಯನ್ನು ದಾಟುವ ಪ್ರಯತ್ನವನ್ನು ನಿರಂತರವಾಗಿ ಮಾಡುತ್ತಾರೆ.

ಕೊಡಗಿನ ಗೌರಮ್ಮನವರು ತಮ್ಮ ಕಥೆಗಳಲ್ಲಿ ಕೌಟುಂಬಿಕ ಸಂಬಂಧಗಳನ್ನು ನಿಭಾಯಿಸುವ ರೀತಿಯೇ ಸ್ವಾರಸ್ಯಕರ. ತಂದೆ ಮಕ್ಕಳ ಸಂಬಂಧಗಳನ್ನಾಗಲೀ, ಅಣ್ಣ ತಂಗಿಯರ ಸಂಬಂಧಗಳನ್ನಾಗಲೀ ಅವರು ಸಾಂಪ್ರದಾಯಿಕ ಚೌಕಟ್ಟಿನಿಂದ ಹೊರತಂದೇ ನೋಡುತ್ತಾರೆ. ಮಾನವಿಯ ಸಂಬಂಧಗಳಲ್ಲೆಲ್ಲ ಅವರನ್ನು ತುಂಬ ಆಕರ್ಷಿಸಿರುವುದೆಂದರೆ ಗೆಳೆತನ. ಗೆಳೆತನ ಬದುಕಿಗೆ ಕೊಡಬಹುದಾದ ಘನತೆಯನ್ನು, ಭರವಸೆಯನ್ನು, ವಿಶೇಷತೆಯನ್ನು ಅವರು ಮತ್ತೆ ಮತ್ತೆ ಮನದಟ್ಟು ಮಾಡಿಕೊಳ್ಳುತ್ತಾರೆ. 'ಕೆಲವು ಕಾಗದಗಳು', 'ಸನ್ಯಾಸಿ ರತ್ನ' ಇಲ್ಲಿ ಉಲ್ಲೇಖಿಸಬಹುದಾದ ಕಥೆಗಳು.

ಗೌರಮ್ಮನವರನ್ನು ಸ್ತ್ರೀವಾದಿ ಹಿನ್ನೆಲೆಯಲ್ಲಿ ನೋಡುವ ವಿಷಯಕ್ಕೆ ಮರಳಿ ಬರುವುದಾದರೆ ಹೆಣ್ಣಿನ ಹೋರಾಟ, ಸಮಸ್ಯೆ ಎನ್ನುವುದು ಇತರ ಸಮಸ್ಯೆಗಳಾದ, ಪ್ರಶ್ನೆಗಳಾದ ಬಡತನ, ಧರ್ಮಾಂಧತೆ, ಶ್ರೇಣೀಕೃತ ವ್ಯವಸ್ಥೆಯ ದುರಂತ, ವ್ಯವಸ್ಥೆಯ ಕ್ರೌರ್ಯ, ಮನುಷ್ಯ ಸಂಬಂಧಗಳ ಬಿಕ್ಕಟ್ಟುಗಳು ಇವುಗಳಿಗಿಂತ ಹೆಚ್ಚೂ ಇಲ್ಲ, ಕಡಿಮೆಯೂ ಇಲ್ಲ. ಸಂಖ್ಯೆಯ ದೃಷ್ಟಿಯಿಂದ ಹೆಣ್ಣನ್ನು ಕುರಿತ ಕಥೆಗಳನ್ನು ಗೌರಮ್ಮ ಹೆಚ್ಚಾಗಿ ಬರೆದಿದ್ದಾರೆ ಎನ್ನುವುದು ನಿಜ. ಆದರೆ ಇತರ ಸಮಸ್ಯೆಗಳ ಕುರಿತ ಕಥೆಗಳನ್ನೂ ಅಷ್ಟೇ ತೀವ್ರತೆಯಿಂದ ಅವರು ಬರೆದಿರುವುದನ್ನು ಗಮನಿಸಿದಾಗ ಎಲ್ಲ ಪ್ರಶ್ನೆಗಳನ್ನೂ ಅವರು ಸಮಾನವಾಗಿ ಕಂಡಿದ್ದಾರೆ ಎನಿಸುತ್ತದೆ. ಹೀಗೆ ಸಮಾಜದ ಇತರ ಪ್ರಮುಖ ಪ್ರಶ್ನೆಗಳ ಜೊತೆ ಜೊತೆಯಲ್ಲಿಯೇ ಹೆಣ್ಣಿನ ಸಮಸ್ಯೆಗಳನ್ನು ಇಟ್ಟು ನೋಡಿದ್ದರಿಂದಾಗಿ ಎರಡು ಯಶಸ್ಸುಗಳು ಅವರಿಗೆ ದಕ್ಕಿದೆ. ಒಂದು, ಹೆಣ್ಣಿನ ಸಮಸ್ಯೆಯನ್ನು ಪ್ರತ್ಯೇಕಿಸಿ ನೋಡುವ ಹೊತ್ತಿನಲ್ಲಿ ಅದಕ್ಕೆ ಒದಗುವ ಮಿತಿಯಿಂದ ಅವರು ಪಾರಾಗಿದ್ದಾರೆ. ಈ ಅಂಶ ಮುಖ್ಯವಾದದ್ದು ಹೆಣ್ಣಿನ ಸಮಸ್ಯೆಯನ್ನು ಸಮುದಾಯದ ಇತರ ಪ್ರಶ್ನೆಗಳಿಂದ ಪ್ರತ್ಯೇಕಿಸಿ ನೋಡಲಾಗುತ್ತಿದೆ ಎನ್ನುವುದೇ ಇಂದು ಸ್ತ್ರೀವಾದಿ ಹೋರಾಟ ಎದುರಿಸುತ್ತಿರುವ ಬಹಳ ಮುಖ್ಯವಾದ ಸವಾಲುಗಳಲ್ಲಿ ಒಂದು. ಇತರ ಜ್ವಲಂತ ಸಮಸ್ಯೆಗಳ ಜೊತೆಯಲ್ಲಿಟ್ಟು ಅವುಗಳನ್ನು ಚರ್ಚಿಸಬೇಕಾದ ಅಗತ್ಯವನ್ನು, ಮಹತ್ವವನ್ನು ಗೌರಮ್ಮನವರು ಇಲ್ಲಿ ಅನಾಯಸವಾಗಿ ಸಾಧಿಸಿದ್ದಾರೆ. ಇದು ತುಂಬ ವಿಶಿಷ್ಟವಾದ

ಅಂಶವೆಂದೇ ಕಾಣಿಸುತ್ತದೆ. ಗೌರಮ್ಮನವರು ಇದನ್ನೆಲ್ಲ ಉದ್ದೇಶ ಪೂರ್ವಕವಾಗಿ ಯೋಚಿಸಿ ಮಾಡಿದ್ದು ಎನ್ನುವುದು ನನ್ನ ವಾದವಲ್ಲ. ಆದರೆ ಸಮಕಾಲೀನ ಸ್ತ್ರೀವಾದಿ ಚಿಂತನೆಯೊಂದಿಗೆ ಇದು ಸಾಧಿಸುವ ಸಾಮ್ಯತೆ ನನಗೆ ಮುಖ್ಯವಾಗಿ ಕಾಣುತ್ತದೆ.

ಎರಡನೆಯದು ಅವರ ಕಥೆಗಳಿಗೆ ಅವರ ಇತರ ಸಮಕಾಲೀನ ಲೇಖಕಿಯರಿಗೆ ಸಾಧ್ಯವಾಗದ ವಿಸ್ತಾರವಾದ ಹರಹು ಸಿಕ್ಕಿದೆ. ಅವರ ಕಥಾ ವಸ್ತುಗಳ ವೈವಿಧ್ಯತೆಯ ಮೂಲವೂ ಇದೇ ಆಗಿದೆ.

ಗೌರಮ್ಮನವರನ್ನು ಕನ್ನಡದ ಇಬ್ಬರು ಪ್ರಮುಖ ಲೇಖಕಿಯರ ಜೊತೆ ಇಟ್ಟು ಚರ್ಚಿಸುವ ಪ್ರಯತ್ನವೊಂದನ್ನು ಮಾಡುತ್ತೇನೆ. ವೈದೇಹಿ ಮತ್ತು ವೀಣಾ ಶಾಂತೇಶ್ವರ.

ವೈದೇಹಿ ಆರ್ದ್ರ ಗರ್ವದ. ಸ್ತ್ರೀಶಕ್ತಿ ವಿಶೇಷದ ಲೇಖಕಿ. ಪ್ರಜ್ಞಾ ಪೂರ್ವಕವಾದ, ಸೈದ್ಧಾಂತಿಕವಾದ ಸ್ತ್ರೀವಾದದ ಹಿನ್ನೆಲೆಯನ್ನು ಇವರ ಕಥೆಗಳಲ್ಲಿ ಗುರುತಿಸಲಾಗುವುದಿಲ್ಲ. ಅವರ ಬರವಣಿಗೆಯಲ್ಲಿ ಸ್ತ್ರೀವಾದ ಎನ್ನುವುದು ಬದುಕಿನ ಹೋರಾಟದಲ್ಲಿ ತನ್ನಿಂತಾನೇ ಅನಾವರಣಗೊಳ್ಳುವ ಸಹಜ ಪ್ರಕ್ರಿಯೆ. ಬದುಕನ್ನು ಕುರಿತ ಹೆಣ್ಣಿನ ಅದಮ್ಯ ಎಂದು ಕರೆಯಬಹುದಾದ ಪ್ರೀತಿಯೇ ಸ್ತ್ರೀವಾದದ ಮೂಲವಾಗಿ ಇಲ್ಲಿ ಕಾಣಿಸಿಕೊಳ್ಳುತ್ತದೆ. ವೈದೇಹಿಯವರ ಕಥೆಗಳ ಮೂಲ ವಿನ್ಯಾಸವೆಂದರೆ ಸ್ತ್ರೀ ಚೈತನ್ಯದ ವಿವಿಧ ಮುಖಗಳ ಅನಾವರಣ, ಬದುಕಿನ ಬಿಕ್ಕಟ್ಟಿನ, ನಿರ್ಣಾಯಕಗಳಿಗೆಯಲ್ಲಿ ಹೆಣ್ಣು ಕುಗ್ಗದೇ, ಸೋಲದೆ ಬದುಕಿಗೆ ಬೆನ್ನು ತಿರುಗಿಸದೇ ನಡೆಸುವ ನಿರಂತರ ಹೋರಾಟವನ್ನು ವೈದೇಹಿ ತಮ್ಮ ಕಥೆಗಳಲ್ಲಿ ಚಿತ್ರಿಸುತ್ತಾ ಹೋಗುತ್ತಾರೆ. ಅಧೀನ ಬದುಕಿನೊಳಗೆ ಸುಖದ ನೆಲಗಳನ್ನು ಹುಡುಕುವುದರಲ್ಲಿಯೂ ಅವರಿಗೆ ಆಸಕ್ತಿಯಿದೆ

ವೈದೇಹಿಯವರ ಸಮಾನತೆಯನ್ನು ಕುರಿತ ದೃಷ್ಟಿಕೋನದಲ್ಲಿ ಗೊಂದಲಗಳಿಲ್ಲ. ಸಮಾನತೆಯ ಹೋರಾಟದಲ್ಲಿ ಹೆಣ್ಣು ಇಂದಲ್ಲ ನಾಳೆ ಗೆಲ್ಲಬಹುದು. ಆದರೆ ಅಂತಹ ಗೆಲುವಿನ ಬಗ್ಗೆ ವೈದೇಹಿಯವರಿಗೆ ಅನುಮಾನಗಳಿವೆ. ಆದ್ದರಿಂದಲೇ ಈ ಬಗೆಯ ಸಮಾನತೆಯ ಹೋರಾಟದಲ್ಲಿ ಅವರಿಗೆ ಆಸಕ್ತಿ ಇಲ್ಲ. ಈ ಸೀಮಿತ ಉದ್ದೇಶದ ಸಮಾನತೆಯ ಆಚೆಗಿನ ಅಮೃತ ಮುಹೂರ್ತಗಳು ಹೆಣ್ಣಿಗೆ ಬದುಕಿನಲ್ಲಿವೆ ಎನ್ನುವುದು ಅವರ ನಿಲುವಾಗಿರುವಂತೆ ಕಾಣುತ್ತದೆ. ಹೀಗೆ ಹೇಳುವಾಗ ಅವರು ವಾಸ್ತವಕ್ಕೆ ಕುರುಡಾಗಿದ್ದಾರೆ ಎಂದಲ್ಲ. ಆರ್ಥಿಕ ಸ್ವಾತಂತ್ರ್ಯ, ಆಯ್ಕೆಯ ಬದುಕಿನ ಅವಕಾಶ ಈ ಎಲ್ಲದಕ್ಕೂ ಅವರ ಕಥೆಗಳು ಒತ್ತಾಯಿಸುತ್ತವೆ. ಆದರೆ ಇವುಗಳನ್ನು ಮೀರಿದ ಅವಳ ಅಂತಃಸತ್ವದಲ್ಲಿ ವೈದೇಹಿಯವರಿಗೆ ಶಂಕೆಯಿಲ್ಲದ ನಂಬಿಕೆ.

ಗೌರಮ್ಮನವರ ಕಥೆಗಳಲ್ಲಿ ಹೆಣ್ಣಿನ ಶಕ್ತಿಯ ಅನಾವರಣಕ್ಕಿಂತ ಸೌಂದರ್ಯದ ಮಾಧುರ್ಯದ ಹುಡುಕಾಟ ಹೆಚ್ಚಾಗಿ ಕಾಣುತ್ತದೆ. ಹೆಣ್ಣಿನ ಸಮಸ್ಯೆಗಳಿಗೆ ಒಂದಲ್ಲ ಒಂದು ಪರಿಹಾರ ಇದೆ ಎನ್ನುವ ಸುಧಾರಣಾವಾದಿ; ಪುನರುಜ್ಜೀವನವಾದೀ ದೃಷ್ಟಿಕೋನ ಗಾಂಧೀಯವರ ಕಲ್ಯಾಣ ರಾಜ್ಯದ ಪರಿಕಲ್ಪನೆಯ ಜೊತೆಯಲ್ಲಿ ಅಖಂಡವಾಗಿ ಬೆರೆಯುವುದರಿಂದಲೂ ಗೌರಮ್ಮನವರ ಕಥೆಗಳಿಗೆ ಈ ದೃಷ್ಟಿಕೋನ ಪ್ರಾಪ್ತವಾಗಿರಬಹುದು.

ವೀಣಾ ಶಾಂತೇಶ್ವರ, ವೈದೇಹಿ, ಇವರಿಬ್ಬರಿಗಿಂತ ಕೊಡಗಿನ ಗೌರಮ್ಮ ಸಂಪೂರ್ಣ ಭಿನ್ನ ನೆಲೆಯನ್ನು ಹೊಂದಿರುವ ಲೇಖಕಿ. ಇವರ ಕಥೆಗಳು ಶುದ್ಧಾಂಗವಾಗಿ ಸ್ವಪ್ರಜ್ಞೆಯ ಹೊಸ ಹೆಣ್ಣಿನ ಬಿಕ್ಕಟ್ಟುಗಳನ್ನು ಹೇಳುವ ಕಥೆಗಳು. ವ್ಯವಸ್ಥೆಯ ಕ್ರೌರ್ಯವನ್ನು ಅದರೆಲ್ಲಾ ಸೂಕ್ಷ್ಮಗಳೊಂದಿಗೆ ಗ್ರಹಿಸಬಲ್ಲವರು. ಆಧುನಿಕತೆಯ ಹಿನ್ನೆಲೆಯಲ್ಲಿಯೂ ಬದಲಾಗುವ ಶೋಷಣೆಯ ಕಲಾತ್ಮಕ ಮಾದರಿಗಳನ್ನು ಇವರ ಕಥೆಗಳು ಖಚಿತವಾಗಿ ಗುರುತಿಸುತ್ತವೆ. ಹೆಣ್ಣನ್ನು ಅದರ ಸೆಕ್ಸ್ ಆಗಿ ನೋಡಲಾಗದ ವ್ಯವಸ್ಥೆಯ ಯಾಜಮಾನ್ಯವನ್ನು ಇವರ ಕಥೆಗಳು ಉದ್ದಕ್ಕೂ ಪ್ರಶ್ನಿಸುತ್ತಾ ಹೋಗುತ್ತವೆ. ಹೀಗೆ ನೋಡುವುದಕ್ಕಿಂತ ಹೆಚ್ಚಾಗಿ ಎದುರು ಪಕ್ಷ ಎಂದೇ ನೋಡುತ್ತಾರೆ. ಇವರ ಈ ನಿಲುವುಗಳು ನವ್ಯ ಸಂದರ್ಭದ ಕನ್ನಡ ಪ್ರಧಾನ ಧಾರೆ ಸಾಹಿತ್ಯದ ಒಂದು ಅಂಗ ಎಂದು ನೋಡಲು ಸಾಧ್ಯ. ಆದ್ದರಿಂದಲೇ ಇವರ ಕಥೆಗಳನ್ನು ಸ್ತ್ರೀವಾದಿ ಕಥೆಗಳು ಎಂದು ಚರ್ಚಿಸುವುದನ್ನು ಕೆಲವು ಸ್ತ್ರೀವಾದಿ ಚಿಂತಕಿಯರು ವಿರೋಧಿಸುತ್ತಾರೆ. ಇವರ ಕಥೆಗಳಲ್ಲಿ ಸ್ತ್ರೀವಾದಿ ಹೋರಾಟದ ಪ್ರತಿಪಾದನೆಯಲ್ಲ, ಅದರ ಅಣಕ ಕಾಣಿಸುತ್ತದೆ ಎನ್ನುವ ಅಭಿಪ್ರಾಯವೂ ಇದೆ. ಆದರೆ ಈ ಎಲ್ಲದರಾಚೆಗೂ ವೀಣಾ ಶಾಂತೇಶ್ವರ ಅವರ ಕಥೆಗಳ ಮಹತ್ವ ಇರುವುದು ಹೊಸ ಹೆಣ್ಣು ಅವಳ ಎಲ್ಲ ಸಿದ್ಧತೆಗಳೊಂದಿಗೂ (ವಿದ್ಯಾಭ್ಯಾಸ, ಉದ್ಯೋಗ, ಕಾನೂನಿನ ಬೆಂಬಲ) 'ಹೊಸ ಬದುಕಿಗೆ' ಪ್ರವೇಶಿಸುವುದರಲ್ಲಿ ಸೋಲುವುದನ್ನು ಇವರ ಕಥೆಗಳು ತೀವ್ರವಾಗಿ ಪರಿಶೀಲಿಸುತ್ತದೆ.

ಗೌರಮ್ಮನವರು 'ಹೊಸ ಹೆಣ್ಣ'ನ್ನು ಈ ಎಲ್ಲ ಸೂಕ್ಷ್ಮಗಳಲ್ಲಿ ಸಂಕೀರ್ಣತೆಗಳಲ್ಲಿ ಗ್ರಹಿಸಿದ್ದರು ಎಂದು ಹೇಳುವುದು ಸ್ವಲ್ಪ ಕಷ್ಟವಾದರೂ, ಪುನರ್ವಿವಾಹದಂತಹ ಕಥೆಗಳಲ್ಲಿ ಈ ಹೊಸ ಹೆಣ್ಣನ್ನು ಅವಳ ಭಾವನಾತ್ಮಕ ಸೂಕ್ಷ್ಮತೆಯೊಂದಿಗೆ ಚಿತ್ರಿಸಲು ಅವರು ಪ್ರಯತ್ನ ಪಡುತ್ತಾರೆ. ಅಥವಾ ವಾಣಿಯ ಸಮಸ್ಯೆಯಂತಹ ಕಥೆಗಳು ಪಲ್ಲಟಗಳ ತಲ್ಲಣಗಳನ್ನು ಹಿಡಿಯುವ ಉದ್ದೇಶದ್ದು ಎನ್ನುವುದೂ ನಿಜ. ಈ ಮಾತನ್ನು ಹೇಳುತ್ತಿರುವಾಗ ಅವರು 27 ನೇ ವಯಸ್ಸಿಗೆ ತಿರಿಕೊಂಡದ್ದನ್ನು ನಾವು ಮರೆಯಲಾಗುವುದಿಲ್ಲ.

ವೈದೇಹಿ ಮತ್ತು ವೀಣಾ ಇಬ್ಬರಲ್ಲೂ ಕಾಣದ ಒಂದು ವಿಶೇಷತೆ ಗೌರಮ್ಮನವರಲ್ಲಿದೆ. ಅದು ಈ ಎಲ್ಲ ಬಿಕ್ಕಟ್ಟುಗಳಿಗೂ ಒಂದು ಸಮಾನವಾದ ಪರಿಹಾರವಿದೆ ಎನ್ನುವ ನಂಬಿಕೆ. ಪ್ರೀತಿಯ ದಿವ್ಯ ಶಕ್ತಿಯಲ್ಲಿ ಎಲ್ಲ ಸಮಸ್ಯೆಗಳಿಗೂ ಒಂದು ಮುಕ್ತಾಯವಿದೆ ಎನ್ನುವ ಖಚಿತ ನಿಲುವು ಅವರದು. ಇಲ್ಲಿ ಪ್ರೀತಿ ಎನ್ನುವುದು ಲಘುವಾದ ಅರ್ಥದಲ್ಲಿ ಅಲ್ಲವೇ ಅಲ್ಲ. ಪ್ರೀತಿಯ ವ್ಯಾಖ್ಯಾನವನ್ನು ಅದರೆಲ್ಲಾ ಅಸಾಧಾರಣ ಶಕ್ತಿಯಲ್ಲಿ, ಘನತೆಯಲ್ಲಿ ಗೌರಮ್ಮನವರು ಕಟ್ಟಿಕೊಂಡಿದ್ದಾರೆ. ಒಂದು ಅಸೀಮ ಶಕ್ತಿಯಾಗಿ, ಎಲ್ಲ ಉಪಾಧಿಗಳನ್ನು ಮೀರುವ, ದೌರ್ಬಲ್ಯಗಳನ್ನು ಗೆಲ್ಲುವ ಧೀರೋದಾತ್ತವಾದ ಮನಸ್ಥಿತಿಯಾಗಿ ಇವರ ಪ್ರೀತಿಯ ವ್ಯಾಖ್ಯಾನವಿದೆ. ಎನ್ನುವ ( Love will do the deed, for, with love stony hearts will bleed ಅನ್ನಾಗಲ್ಡನ ಮಾತನ್ನು ಇಲ್ಲಿ ನೆನಪಿಸಿಕೊಳ್ಳಬಹುದು )

ಜಾತಿಯ ಸಮಸ್ಯೆಯೇ ಆಗಿರಲಿ, ಗಂಡು ಹೆಣ್ಣಿನ ಸಮಸ್ಯೆಯೇ ಆಗಿರಲಿ, ವೇಶ್ಯೆಯೊಬ್ಬಳ ಸಮಸ್ಯೆಯಾಗಿರಲಿ ಎಲ್ಲಕ್ಕೂ ಪ್ರೀತಿಯಲ್ಲಿ ಉತ್ತರವಿದೆ ಎನ್ನುವ ಗಾಢ ನಂಬಿಕೆ ಅವರ ಕಥೆಗಳಲ್ಲಿ ಕಾಣಿಸಿಕೊಳ್ಳುತ್ತದೆ. ಇದು ಅದರ ಆಶಯದಲ್ಲಿ, ಸ್ವರೂಪದಲ್ಲಿ ಯುಟೋಪಿಯನ್ ಎನ್ನಿಸಬಹುದು, ಹುಸಿ ಆಶಾವಾದ ಎಂದೂ ಇದನ್ನು ಅರ್ಥೈಸಬಹುದು. Too romantic in its spirit ಎಂದೂ ಕರೆಯಬಹುದು. ನಮಗೆ ಏನೂ ಅನ್ನಿಸಲಿ, ಗೌರಮ್ಮನವರಿಗೆ ಮಾತ್ರ ಅದರಲ್ಲಿ ಶಂಕೆಯಿಲ್ಲದ ವಿಶ್ವಾಸವಿದೆ. ಆ ಅಂಶ ನನಗೆ ಕುತೂಹಲಕರವಾಗಿ ಕಾಣಿಸುತ್ತದೆ. ಯಾಕೆಂದರೆ ವಾಸ್ತವದ ಅರಿವಿರದ ಸ್ಥಿತಿಯಿಂದ ಹುಟ್ಟಿದ ನಿಲುವಲ್ಲ ಇದು. ಮತ್ತೆ ಅದನ್ನು ವಿವರಿಸಿಕೊಳ್ಳಲು ಗಾಂಧೀವಾದಕ್ಕೆ ಮರಳಬಹುದು. ಯಾಕೆಂದರೆ ಗಾಂಧೀವಾದಿ ದೃಷ್ಟಿಕೋನಕ್ಕೆ ಈ ಬಗೆಯ ನಿಲುವು ಸಹಜವಾಗಿ ಸಿದ್ಧಿಸುತ್ತದೆ. ಪುನರುಜ್ಜೀವನವಾದಿ ದೃಷ್ಟಿಕೋನ ಮೂಲತಃ ಸಮಸ್ಯೆಗಳನ್ನು ಆಸಕ್ತವಾಗಿರುತ್ತದೆ. ಆದ್ದರಿಂದಲೇ ಆ ಮಾದರಿಗಳನ್ನು ಸಮಾಜಶಾಸ್ತ್ರಜ್ಞರು ಕಲ್ಯಾಣ ರಾಜ್ಯ ಪರಿಕಲ್ಪನೆಯ ಹಿನ್ನೆಲೆಯಲ್ಲಿಯೇ ಚರ್ಚಿಸುವುದಕ್ಕೆ ಇಷ್ಟಪಡುತ್ತಾರೆ.

ಕೆಲವು ಉದಾಹರಣೆಗಳ ಮೂಲಕವೇ ಇದನ್ನು ಸ್ಪಷ್ಟಪಡಿಸಿಕೊಳ್ಳಬಹುದಾದರೆ ಮನುವಿನ ರಾಣಿಯಂತಹ ಕಥೆಯಲ್ಲಿ ವೇಶ್ಯೆಯನ್ನು ಕುರಿತ ನಮ್ಮ ದೃಷ್ಟಿಕೋನದಲ್ಲಿ ಆಗಬೇಕಾಗಿರುವ ಬದಲಾವಣೆಯನ್ನು ವೈಚಾರಿಕ ನೆಲೆಯಿಂದ ಗೌರಮ್ಮ ವಿಶ್ಲೇಷಿಸುವುದಿಲ್ಲ ಬದಲಿಗೆ ಮಾನವ ಪ್ರೀತಿಯಲ್ಲಿ ಇದಕ್ಕೆ ಪರಿಹಾರ ಹುಡುಕುತ್ತಾರೆ. ಆಧುನಿಕ ಸಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ಇದಕ್ಕೆ ಪರಿಹಾರ ಹುಡುಕುತ್ತಾರೆ. ಆಧುನಿಕ ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ಗೌರಮ್ಮನವರ ಕಥೆಗಳನ್ನು ಚರ್ಚಿಸಲು ಹೊರಟರೆ ನಮಗೆ ನಿರಾಸೆಯಾಗುವುದು ಖಂಡಿತ. ಗೌರಮ್ಮನವರ ಇನ್ನೊಂದು ಅತ್ಯುತ್ತಮ ಕಥೆ 'ಹೋಗಿಯೇ ಬಿಟ್ಟ' ಕಥೆಯ ಮೂಲಕವೂ ಈ ಚರ್ಚೆಯನ್ನು ಬೆಳೆಸಬಹುದು. ಗಂಡು ಹೆಣ್ಣಿನ ಲೋಕೋತ್ತರ ಪ್ರೀತಿಯ ಮೂಲಕವೇ ಇಲ್ಲಿ ಜಾತಿ ವ್ಯವಸ್ಥೆಗೆ ಉತ್ತರ ಹುಡುಕುವ ಪ್ರಯತ್ನವಿದೆ. ಜಾತಿ ಬಿಡಲು ಅವನು ತಯಾರಿದ್ದ, ಜೀವಧಾರೆ ಎರೆಯಲು ಅವಳು ಸಿದ್ಧಳಿದ್ದಳು ಎನ್ನುವ ಸೂತ್ರದಲ್ಲಿಯೇ ಅವರ ದೃಷ್ಟಿಕೋನ ಸ್ಪಷ್ಟವಾಗಿದೆ.

'ಮುನ್ನಾದಿನ' ನನ್ನ ಪ್ರಕಾರ ಇವರ ಅತ್ಯುತ್ತಮ ಕಥೆಗಳಲ್ಲಿ ಒಂದು. ಅವರು ಸಾಯುವ ಹಿಂದಿನ ದಿನ ಬರೆದ ಕಥೆಯಿದು. ಬಹು ಆಯಾಮಗಳ ಕಥೆ ಇದು. ಕಾಡ ಎನ್ನುವ ಹೆಸರಿನವನೊಬ್ಬ ಬದುಕಿನ ಹೋರಾಟದ ಅನಿವಾರ್ಯತೆಯಲ್ಲಿ ಜೋಸೆಫ್ ಕಾಡನಾಗುವುದು, ಮುಂದುವರೆದು ಇಸ್ಮಾಯಿಲ್ ಕಾಡ ಆಗುವುದನ್ನು ಕಥೆ ಅದರೆಲ್ಲ ಸೂಕ್ಷ್ಮಗಳಲ್ಲಿ ಚಿತ್ರಿಸುತ್ತದೆ. ಈ ಕಥೆಯಲ್ಲಿಯೂ ಕಾಡ ಮೊದಲನೆಯ ಬಾರಿಗೆ ಅಸ್ತಿತ್ವದ ಅನಿವಾರ್ಯತೆಯಲ್ಲಿ ಮತಾಂತರ ಹೊಂದುತ್ತಾನೆ.

ಇಷ್ಟಿದ್ದೂ ಗೌರಮ್ಮ ಮೂಲತಃ ಅವರ ಮನೋವಿನ್ಯಾಸದಲ್ಲಿ ರೊಮ್ಯಾಂಟಿಕ್‌ರೂ ಆಗಿದ್ದರು ಎನಿಸುತ್ತದೆ. ಗಾಂಧಿವಾದಕ್ಕೂ ರೊಮ್ಯಾಂಟಿಸಿಸಮ್‌ಗೂ ಇರುವ ಭೂಮಿ-ಆಕಾಶಗಳ ಅಂತರದ ವೈದೃಶ್ಯದ ಹಿನ್ನೆಲೆಯಲ್ಲಿಯೂ ಇದು ನಿಜ. ಇದಕ್ಕೊಂದು ಸಣ್ಣ ಸಾಕ್ಷವನ್ನು ಕೊಡುತ್ತೇನೆ. ಇವರಲ್ಲಿ ಕಥೆಗಳಲ್ಲಿ ಮತ್ತೆ ಮತ್ತೆ ಪುನರಾವರ್ತನೆಯಾಗುವ ಹೆಸರೆಂದರೆ ವಸಂತ.

ನೈತಿಕತೆಯ ಹುಡುಕಾಟ ಗೌರಮ್ಮನವರ ಕಥೆಗಳ ಇನ್ನೊಂದು ಮುಖ್ಯವಾದ ಕೇಂದ್ರ. ಪ್ರಾಯಶ್ಚಿತ, ಯಾರು?, ಒಂದು ಪುಟ್ಟ ಚಿತ್ರ ಕಥೆಗಳಲ್ಲಿ ಈ ಅಂಶ ಸ್ಪಷ್ಟವಾಗಿ ಕಾಣಿಸುತ್ತದೆ. ಬದಲಾವಣೆಯ, ಸುಧಾರಣೆಯ ಒಂದು ಮುಖ್ಯ ಮಾರ್ಗವೆಂದರೆ ನಿಷ್ಠುರ ನೈತಿಕ ನೆಲೆಯ ಹುಡುಕಾಟ. ಈ ಕಾರಣಕ್ಕಾಗಿಯೇ ಈ ನೆಲೆಯ ಬಗೆಗೂ ಅವರಿಗೆ ತುಂಬ ಆಸಕ್ತಿ ಇರುವಂತೆ ಕಾಣಿಸುತ್ತದೆ.

ಸಮಾಜದ ಬಹುಮುಖಿ ಗ್ರಹಿಕೆಗಳ ಕಾರಣಕ್ಕಾಗಿ, ತನ್ನ ಕಾಲದ ಎಲ್ಲ ನಿರೀಕ್ಷೆಗಳಿಗೆ ಸೂಕ್ಷ್ಮವಾಗಿ ಸ್ಪಂದಿಸಿದ ಕಾರಣಕ್ಕಾಗಿ, ತಮ್ಮ ಕಾಲವನ್ನು ಮೀರಿದ ಆಶಯಗಳ ಕಾರಣಕ್ಕಾಗಿ, ಈ ನಿರೀಕ್ಷೆಗಳೂ ಮತ್ತು ಆಶಯಗಳು ಇವತ್ತಿನವೂ ಆಗಿವೆ ಎನ್ನುವುದರಲ್ಲಿಯೇ ಗೌರಮ್ಮನವರ ಕಥೆಗಳ ಪ್ರಸ್ತುತತೆ ಇದೆ.

# ಸ್ವಾತಂತ್ರ್ಯ –
# ನೆಲೆಗಳು ಮತ್ತು ಅಪಕಲ್ಪನೆಗಳು
## (ಪಿತೃಕೇಂದ್ರಿತ ಸಮಾಜ ವ್ಯವಸ್ಥೆಯಲ್ಲಿ)

* ಡಾ॥ ಸಬೀಹಾ

ಅಭಿವ್ಯಕ್ತಿ ಸ್ವಾತಂತ್ರ್ಯ ಎಂದರೆ ವ್ಯಕ್ತಿ ತನ್ನ ಅನಿಸಿಕೆಗಳನ್ನು, ಅಭಿಪ್ರಾಯ, ನಿಲುವುಗಳನ್ನು ಇನ್ನೊಬ್ಬರಿಗೆ, ಇನ್ನೊಂದು ಗುಂಪಿಗೆ ಅಥವಾ ಸಮುದಾಯಕ್ಕೆ ಹೇಳುವ ಅವಕಾಶ ಪಡೆದಿರುವುದು ಎಂಬ ಅರ್ಥ ಮಾತ್ರವಲ್ಲ; ಪ್ರತಿಯಾಗಿ ಇನ್ನೋರ್ವರ, ಗುಂಪಿನ, ಸಮುದಾಯದ ಅಭಿಪ್ರಾಯಗಳನ್ನೂ ಕೇಳುವ ಸಹನೆ, ತಮಗೆ ಸರಿ ಎನಿಸಿದ್ದನ್ನು ಸ್ವೀಕರಿಸುವ ಮನಃಸ್ಥಿತಿ; ಒಪ್ಪಲಾಗದ್ದನ್ನು ನೇರವಾಗಿಯೇ ನಿರಾಕರಿಸುವ ಸ್ವಾತಂತ್ರ್ಯವನ್ನೂ ಒಳಗೊಂಡಿರುತ್ತದೆ ಎಂದು ಭಾವಿಸಿದ್ದೇನೆ. ನಮ್ಮದು ವಿಶೇಷವಾಗಿ ಪಿತೃಕೇಂದ್ರಿತ ಸಮಾಜ ವ್ಯವಸ್ಥೆ. ಈ ಸಮಾಜದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ ಸ್ತ್ರೀ–ಪುರುಷರ ಸಂದರ್ಭದಲ್ಲಿ ಹೇಗಿದೆ ಎಂಬುದರ ಕುರಿತು ಕೆಲವು ಟಿಪ್ಪಣಿಗಳನ್ನು ನಿಮ್ಮ ಮುಂದಿಡಲು ಇಚ್ಛಿಸುತ್ತೇನೆ.

ಇಂದು ಮಹಿಳೆಗೆ ಅಭಿವ್ಯಕ್ತಿ ಸ್ವಾತಂತ್ರ್ಯ ಇದೆಯೇ ಎಂದು ಕೇಳಿಕೊಂಡರೆ ಎಲ್ಲರ ಮೊದಲ ಪ್ರತಿಕ್ರಿಯೆ 'ಇದೆ'; ನಿಸ್ಸಂಶಯವಾಗಿ, ಎಂಬುದೇ ಆಗಿದೆ. ಒಂದು ನೂರು ವರ್ಷಗಳ ಹಿಂದಿನ ಭಾರತದ ಮಹಿಳೆಯ ಸ್ಥಿತಿ–ಗತಿ, ರೀತಿ–ನೀತಿ, ಬಂಧನ–ಸ್ವಾತಂತ್ರ್ಯ ಇತ್ಯಾದಿಗಳನ್ನು ತುಲನಾತ್ಮಕವಾಗಿ ನೋಡಿದಾಗ, ಆಕೆಯ ಪ್ರಗತಿಯ ಹೆಜ್ಜೆಗಳು ನಿಚ್ಚಳವಾಗಿ ತೋರುತ್ತವೆ. ಇಂದು ಶಿಕ್ಷಣ ಪಡೆಯಲು, ಉದ್ಯೋಗ ಗಳಿಸಲು, ಸಮಾಜಿಕ, ರಾಜಕೀಯ, ವೈಜ್ಞಾನಿಕ ರಂಗಗಳಲ್ಲಿ ತೊಡಗಿಸಿಕೊಳ್ಳಲು ಆಕೆ ಹಿಂದಿನಷ್ಟು ಹೋರಾಡ ಬೇಕಾಗಿಲ್ಲ. ಒಮ್ಮೆ ಕನಸಾಗಿ ಕಂಡ ಸಂಗತಿಗಳು ಇಂದು ಕೆಲ ಮಹಿಳೆಯರ ಪಾಲಿಗಾದರೂ ನನಸಾಗಿದೆ ಎಂಬುದರಲ್ಲಿ ಎರಡು ಮಾತಿಲ್ಲ. ಅದಾಗ್ಯೂ ಮಹಿಳೆಗೆ ಅಭಿವ್ಯಕ್ತಿ ಸ್ವಾತಂತ್ರ್ಯ ದೊರೆತಿದೆಯೇ? ಅಥವಾ ಮಹಿಳೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪಡೆದುಕೊಂಡಿದ್ದಾಳೆಯೇ ಎಂದು ಕೇಳಿಕೊಳ್ಳಬೇಕಾಗಿದೆ.

ಲಿಂಗ ಅಸಮಾನತೆಯ ಬುನಾದಿಯ, ಮೇಲೆ ನಿಂತ ಯಾವ ಸಮಾಜದಲ್ಲೂ ಅಭಿವ್ಯಕ್ತಿ ಸ್ವಾತಂತ್ರ್ಯ ಸ್ತ್ರೀ–ಪುರುಷರಿಗೆ ಸಮಾನವಾಗಿ ದೊರೆಯಲು ಸಾಧ್ಯವಿಲ್ಲ. ಇಂಥಲ್ಲಿ ಒಂದು ವರ್ಗ ವಿಶೇಷ ಸವಲತ್ತನ್ನು ಅನುಭವಿಸಿದರೆ, ಇನ್ನೊಂದು ವರ್ಗ ಸೊರಗಿ ಹೋಗಿರುತ್ತದೆ. ಪಿತೃ ಕೇಂದ್ರಿತ ಸಮಾಜ ವ್ಯವಸ್ಥೆಯಲ್ಲಿ ಸ್ತ್ರೀ ಪುರುಷರ ಸ್ವಭಾವಗಳನ್ನು, ವರ್ತನೆಗಳನ್ನು, ಗುಣಗಳನ್ನು, ತಪ್ಪಾಗಿ ತಿಳಿಯಲಾಗಿದೆ ಮತ್ತು ಆ ತಪ್ಪುಗಳನ್ನೇ ಅವರು ಇರಬೇಕಾದ ಕ್ರಮ ಎಂದು ಬೋಧಿಸಲಾಗಿದೆ. ಇದರಿಂದ ಸ್ತ್ರೀ ಪುರುಷರಿಬ್ಬರ ವ್ಯಕ್ತಿಗಳೂ ಸಂಪೂರ್ಣವಾಗಿ ಅರಳಲು ಈ ಸಮಾಜದಲ್ಲಿ ಅವಕಾಶ ಇಲ್ಲವಾಗಿದೆ. ಇಂಥ ಸಮಾಜದಲ್ಲಿ ಸ್ತ್ರೀಯರದು ಕೇವಲ 'ಕೇಳುವ' ಸಂಸ್ಕೃತಿಯಾದರೆ, ಪುರುಷರದು, 'ಹೇಳುವ', 'ನಿರ್ದೇಶಿಸುವ' ಸಂಸ್ಕೃತಿಯಾಗುತ್ತದೆ. ಅಗತ್ಯವಿರಲಿ, ಇಲ್ಲದಿರಲಿ, ಸಹಾಯ ಕೇಳಲಿ, ಕೇಳದಿರಲಿ ತನಗೆ ಸಂಬಂಧಿಸಿದ ಸ್ತ್ರೀಯ ವೈಯಕ್ತಿಕ, ಔದ್ಯೋಗಿಕ, ಸಾಮಾಜಿಕ, ರಾಜಕೀಯ ಸಮಸ್ಯೆಗಳಿಗೆ, ವಿಷಯಗಳಿಗೆ ಪುರುಷ ಸಲಹೆ ನೀಡು ವುದನ್ನು, ನಿರ್ದೇಶನ ಮಾಡುವುದನ್ನು, ನಿರ್ಧಾರಗಳನ್ನು ಹೇರುವುದನ್ನು ತನ್ನ ಕರ್ತವ್ಯ ಎಂದೇ ಭಾವಿಸಿರುತ್ತಾನೆ. ಇದರ ಫಲವನ್ನು ಗ್ರಾಮ ಮತ್ತು ಜಿಲ್ಲಾ ಪಂಚಾಯತು ಸಭೆಗಳು ಮುಂದಿಟ್ಟಿವೆ.

ಸಾಮಾನ್ಯ ಮಹಿಳೆಯ ಬದುಕಿನಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದ ಸಾಧ್ಯತೆ ಮತ್ತು ಪರಿಮಿತಿಗಳನ್ನು ಗಮನಿಸೋಣ. ಒಂದು ಮನೆಯಲ್ಲಿ ಯಾವುದೇ ಕೆಲವು ಮುಖ್ಯ ತೀರ್ಮಾನಗಳು ರೂಪುಗೊಳ್ಳುವಾಗ ಆ ಮನೆಯ ಗೃಹಿಣಿ, ಹುಡುಗಿ ಮುಂತಾದವರು ಎಲ್ಲಿ ನಿಂತಿರುತ್ತಾರೆ? ಏನನ್ನು ಮಾಡುತ್ತಿರುತ್ತಾರೆ? ಹೇಳಲೆತ್ನಿಸುತ್ತಾರೆ, ಹಾಗೂ ಅವರ ಅಭಿಪ್ರಾಯಗಳಿಗೆ ಎಷ್ಟು ಮಾನ್ಯತೆ ದೊರೆಯುತ್ತದೆ? ಎಂಬುದನ್ನು

ಅವಲೋಕಿಸಿದರೆ, ತಮಗೊಂದು ಸ್ಪಷ್ಟ ಚಿತ್ರಣ ಸಿಕ್ಕಿ ಬಿಡುತ್ತದೆ.

ಮನೆಯ ಹೆಣ್ಣು ಮಕ್ಕಳು ಏನನ್ನು ಓದಬೇಕು, ಎಷ್ಟು ಓದಬೇಕು, ಯಾವಾಗ ವಿವಾಹವಾಗಬೇಕು, ವೃತ್ತಿಗೆ ಕ ಲಿಡಬೇಕೇ ಬೇಡವೇ ಎಂಬಿತ್ಯಾದಿ ತೀರ್ಮಾನಗಳ ನಿರ್ಧಾರವಾಗುವುದು. ಯಾರಿಂದ? ವಿವಾಹಾನಂತರದ ಬದುಕಿನಲ್ಲಿಯೂ ಅವಳು ತನ್ನ ಅನಿಸಿಕೆಗಳನ್ನು ಅಭಿವ್ಯಕ್ತಿಸಿರುವುದು ಎಷ್ಟಿವೆ? ತನ್ನ ಕುಟುಂಬವನ್ನು ಬೆಳೆಸಬೇಕೇ ಬೇಡವೇ? ಯಾವಾಗ ಬೆಳೆಸಬೇಕು? ಎಲ್ಲಿಗೆ ನಿಲ್ಲಿಸಬೇ ು? ಎಂಬ ನಿರ್ಧಾರ ಗಳಲ್ಲೂ ಅವಳಿಗೆ ಆಯ್ಕೆ ಎಷ್ಟಿದೆ? ಲೈಂಗಿಕ ಬದುಕಿನ ನೋವು - ನಲಿವುಗಳನ್ನಾಗಲಿ, ದಮನ ದೌರ್ಜನ್ಯ ಗಳನ್ನಾಗಲಿ ಅಭಿವ್ಯಕ್ತಿಸಲು ಇಲ್ಲಿ ಅವಕಾಶವಿದೆಯೇ?

ಒಂದು ವೇಳೆ ಮನೆಯ ಮಲಗುವ ಕೋಣೆಗಳಿಗೆ, ಅಡುಗೆ ಮನೆಗಳಿಗೆ "ಮಾತು" ಬರುವುದಾಗಿದ್ದಲ್ಲಿ ಕುಟುಂಬದೊಳಗಿನ ಕ್ರೌರ್ಯದ, ದಮನದ ದೊಡ್ಡ ಇತಿಹಾಸವೇ ತೆರೆದುಕೊಳ್ಳಲು ಸಾಧ್ಯವಿತ್ತು. ಮನೆಯ ಒಳಗಿನ ಬದುಕು "ಖಾಸಗಿ" ಎನ್ನುವ ಕಾರಣಕ್ಕೆ ಎಲ್ಲೂ ದಾಖಲಾಗುವುದಿಲ್ಲ. ಅವರಿಗೆ ಸಂಘಟಿತ ರಾಗಲು ಸಾಧ್ಯವಾಗುವುದಿಲ್ಲ, ಸೊಲ್ಲೆತ್ತುವ ಅವಕಾಶವು ಕರ್ತವ್ಯ, ನೀತಿ, ಧರ್ಮ ಎಂಬ ಮಂತ್ರದಂಡಗಳಿಂದ ಸಾಧ್ಯ ವಾಗುವುದಿಲ್ಲ. ಒಂದು ವೇಳೆ ನ್ಯಾಯ ಕೇಳಲು ಹೋದರೂ ಪೋಲೀಸ್ ಇಲಾಖೆಯಲ್ಲಿ ಅವು ದಾಖಲಾಗುವುದೇ ಇಲ್ಲ.

ಮಹಿಳೆಯರ ಶೋಷಣೆಯ, ದಮನದ ಸಂಗತಿ ಗಳು ಅವರ ಪಾಲಿಗೆ "ಮಾತನಾಡಬಾರದ ಸಂಗತಿ" ಗಳಾಗಿರುತ್ತವೆ. ಗಂಡಸರ ಎದುರು ಗಟ್ಟಿಯಾಗಿ ಮಾತನಾಡಬಾರದು, ವಾದಿಸಬಾರದು, ಮನೆಯ ಗುಟ್ಟು ಮನೆಯಲ್ಲೇ ಇರಬೇಕು - ಇವೇ ಮುಂತಾದ ಅನೇಕ ನಿರ್ದೇಶನಗಳನ್ನು ಬಾಲ್ಯದಿಂದಲೇ ಮಹಿಳೆಗೆ ಉಣಿಸುತ್ತಾ ಬಂದ ಸಮಾಜ, ಮಹಿಳೆಯಿಂದ ನಿರೀಕ್ಷಿಸುವುದು ನಯ, ವಿನಯ, ಮೌನ, ಸಹನಶೀಲತೆ, ವಿಧೇಯತೆ ಇತ್ಯಾದಿ ಗುಣಗಳನ್ನು. ಹೀಗಲ್ಲದ ಸ್ಥಿತಿಯನ್ನು 'ಕುಟುಂಬಕ್ಕೆ ದ್ರೋಹ ಬಗೆದಂತೆ' ಎಂದು ಸಾರಲಾಗುತ್ತದೆ. ಊಟ, ಉಡುಗೆ, ಮಾತು ಉದ್ಯೋಗ, ಆಯ್ಕೆ ಇತ್ಯಾದಿ ಯಾವುದನ್ನೇ ಗಮನಿಸಿ, ಮಹಿಳೆ ತನ್ನ ನೆಲೆಯಿಂದ ಆರಿಸಿಕೊಳ್ಳುವ ಇತರರ ಹಿತದ ಹಿನ್ನೆಲೆಯಲ್ಲಿ ನಿರ್ಧರಿಸುತ್ತಾಳೆ. ಇದು ಅವರಿಗಿಷ್ಟ, ಇವರಿಗಿಷ್ಟ ಎನ್ನುತ್ತ "ತನ್ನಿಷ್ಟ"ವೊಂದನ್ನು ಮರೆಯುತ್ತಾ ಸಾಗುತ್ತಳೆ. ಎಂದರೆ ಸ್ತ್ರೀ ತನಗೇ ಸಂಬಂಧಿಸಿದ. ತನ್ನ ಬದುಕಿನ ಬಹುಮುಖ್ಯ ತಿರುವಿಗೆ ಕಾರಣ ವಾಗಬಲ್ಲ, ತನ್ನ ನಿಕಟ ಸಂಬಂಧಿಗಳ ಇತ್ಯಾದಿ ಯಾವ ವಿಚಾರದಲ್ಲೇ ಆಗಲಿ ತೀರ್ಮಾನ ಕೈಗೊಳ್ಳುವ, ಅಭಿಪ್ರಾಯ ವ್ಯಕ್ತಪಡಿಸುವ ಮುಕ್ತ ಅವಕಾಶಗಳನ್ನೇ ಕಳೆದುಕೊಳ್ಳುತ್ತಾಳೆ. ಈ ಎಲ್ಲ ತೀರ್ಮಾನಗಳೂ ತಂದೆ, ಅಣ್ಣ-ತಮ್ಮ, ಗಂಡ-ಮಗ ಮುಂತಾದವರ ಅಭಿಪ್ರಾಯ ಮತ್ತು ತೀರ್ಮಾನಗಳ ಮೇಲೆ ನಿರ್ಧರಿತವಾಗುತ್ತವೆ. ಈಗಾಗಲೇ ಹೇಳಿದಂತೆ ಈ ಶೋಷಣೆಯ ಮತ್ತು ದಮನದ ಸಂಗತಿಗಳು "ಮಾತ ನಾಡಬಾರದ ಸಂಗತಿಗಳೆಂಬ ಕಾರಣಕ್ಕೆ ಹೊರ ಬರುವುದಿಲ್ಲ. ಶೋಷಣೆಯ ವಿರುದ್ಧ ಧ್ವನಿ ಎತ್ತುವುದ ಕ್ಕಿಂತ ಸಹಿಸುವುದೇ ಹೆಚ್ಚು ಶ್ರೇಯಸ್ಕರ ಎಂಬ ಸ್ಥಿತಿಯೊಂದು ಮಹಿಳೆಯ ಪಾಲಿಗೆ ನಿರ್ಮಾಣ ವಾಗಿರುತ್ತದೆ. ಒಂದು ವೇಳೆ ಧ್ವನಿ ಎತ್ತಿದಲ್ಲಿ, ಅವಳು ಎಂತಹ ಕಸಿವಿಸಿಯ ಸ್ಥಿತಿಯನ್ನು ಎದುರಿಸುತ್ತಾ ಳೆಂದರೆ, ಅದರಿಂದಾಗಿ ಅವಳು ಮೌನಕ್ಕೆ ಶರಣಾ ಗುತ್ತಾಳೆ. ಹೀಗೆ ಹೆಂಗಸರ "ಬಾಯಿ ಮುಚ್ಚಿಸುವ ಕೆಲಸ" ಕುಟುಂಬದಿಂದ ಆರಂಭವಾಗಿ ಸಮಾಜದ ವಿವಿಧ ಕ್ಷೇತ್ರಗಳವರೆಗೆ ವ್ಯಾಪಿಸಿದೆ. ದಮನವನ್ನು ಸಹಿಸುವುದು ಗಂಡಸಿಗೆ ಅಪಮಾನದ ಸಂಗತಿಯೂ ಹೆಂಗಸಿಗೆ ಮೌಲ್ಯವೂ ಆಗಬೇಕೆಂಬ ನಿಲುವೇ ಪ್ರಶ್ನಾರ್ಹ.

ಇಂದಿಗೂ ಗಂಡಸರೆದುರು ತಲೆಗೆ ಸೆರಗು ಹೊದ್ದು ಮನೆಯ ಒಳ ಸೇರಬೇಕಾದ, ಪಂಚಾಯಿತಿ ಕಟ್ಟೆಯಲ್ಲಿ ಇಂದಿಗೂ ಪ್ರವೇಶವನ್ನೇ ಪಡೆಯದ ಸ್ಥಿತಿ ಯಲ್ಲಿರುವ ಮಹಿಳೆಯರ ಸಂದರ್ಭದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಅರ್ಥವಿದೆಯೇ? ಇಂಥ ವಿಷಮ ವಾತಾವರಣ ದಲ್ಲಿ ಜನರಲ್ಲಿ ಅರಿವನ್ನು ಮೂಡಿಸಲು ಯತ್ನಿಸಿದ ಬಾಂವ್ರಿ ದೇವಿ, ಲೈಂಗಿಕ ಕಿರುಕುಳದ ವಿರುದ್ಧ ದನಿ ಎತ್ತಿದ

ರೂಪನ್ ಬಜಾಜ್, ಲೈಂಗಿಕ ಹಲ್ಲೆಯನ್ನು ಪ್ರತಿಭಟಿಸಿದ ಅಂಜನಾ ಶರ್ಮಾರಿಗೆ ಸಮಾಜ ನೀಡಿದ ಬಳುವಳಿ ಅಭಿವ್ಯಕ್ತಿ ಸ್ವಾತಂತ್ರ್ಯದ ದ್ಯೋತಕವೇ?

ಹೆಂಗಸರ ಬಾಯಿ ಮುಚ್ಚಿಸಲು ಬಳಸುವ ಅತ್ಯಂತ ಸತ್ವಶಾಲೀ ಆಯುಧ ಎಂದರೆ ಅವರ ನೈತಿಕತೆಯ ಮೇಲಿನ ಪ್ರಹಾರ, ತನ್ನ ವೈರಿ ಪುರುಷನನ್ನು ಕೆರಳಿಸಲು, ತೇಜೋವಧೆ ಮಾಡಲು ಇಂದು ಆ ವ್ಯಕ್ತಿಗೆ ಸಂಬಂಧಿಸಿದ ಸ್ತ್ರೀಯ ಮೇಲಿನ ಲೈಂಗಿಕ ಹಲ್ಲೆಯ ಅಸ್ತ್ರವನ್ನೇ ಆಯ್ದು ಕೊಳ್ಳಲಾಗುತ್ತದೆ. ಹೀಗಾಗಿ ಕುಟುಂಬದಿಂದ ಹೊರಗೆ ಹೆಜ್ಜೆ ಇಡುವ ಸ್ತ್ರೀಯ ಬದುಕು ಒಂದರ್ಥದಲ್ಲಿ ಕತ್ತಿಯು ಮೇಲಿನ ನಡಿಗೆಯಾಗಿದೆ. ಪಿತೃಕೇಂದ್ರಿತ ಮೌಲ್ಯಗಳಿಗೆ ಧಕ್ಕೆ ಯಾಗದಷ್ಟು ಕಾಲ ಆಕೆ ಸುರಕ್ಷಿತಳು. ದಕ್ಕೆಯಾದ ಮರು ಘಳಿಗೆಯಲ್ಲೇ ಆಕೆಯ ಮೇಲೆ ದೋಷಾ ರೋಪಣೆ. ವಿವಿಧ ರಂಗಗಳಲ್ಲಿ ದುಡಿವ, ತೊಡಗಿಸಿ ಕೊಂಡ ಮಹಿಳೆಯರು ಇತರರಲ್ಲಿ ಅರಿವನ್ನು ಮೂಡಿಸಲು ಯತ್ನಿಸಿದರೆ, ಹಕ್ಕಿಗಾಗಿ ಧ್ವನಿ ಎತ್ತಿದರೆ, ಶೋಷಣೆಯನ್ನು ಪ್ರತಿಭಟಿಸಿದರೆ, ಅಂಥ ಸ್ತ್ರಿಯರ ನೈತಿಕತೆ ಕುರಿತು ಅಪಪ್ರಚಾರ ಮತ್ತು ಅವರ ಹಾಗೂ ಅವರ ಕುಟುಂಬದ ಮೇಲೆ ಮಾನಸಿಕ ಹಲ್ಲೆಗಳು ಜರುಗುತ್ತವೆ.

ಆದುದರಿಂದ ವಿದ್ಯಾವಂತ-ಅವಿದ್ಯಾವಂತ, ಉದ್ಯೋಗಸ್ಥ-ಗೃಹಿಣಿ ಇತ್ಯಾದಿ ಯಾರೇ ಇರಲಿ, ಮಹಿಳೆ ಮೊದಲು ಕೇಳಿಕೊಳ್ಳಬೇಕಾದ ಪ್ರಶ್ನೆ-ನಮ್ಮ ಚಿಂತನಾ ಕ್ರಮಗಳು ಎಷ್ಟು ನಮ್ಮವು? ಎಷ್ಟು ವ್ಯವಸ್ಥೆಯಿಂದ ಪ್ರಭಾವಿತವಾದವುಗಳು? ನಮ್ಮ ಸ್ವಭಾವ, ಕನಸು, ವರ್ತನೆ, ಆಯ್ಕೆ, ನಿರ್ಧಾರ ಈ ಮೊದಲಾದವೆಲ್ಲ ನಾವು ಇಚ್ಛಿಸಿ ರೂಪಿಸಿ ಕೊಂಡವುಗಳೇ ಅಥವಾ ಸಮಾಜ/ಸಂಸ್ಕೃತಿಯಿಂದ ಪ್ರಭಾವಿತವಾದವುಗಳೇ? ಎಂದು ಕೇಳಿಕೊಂಡು ಉತ್ತರ ಕಂಡುಕೊಳ್ಳಬೇಕಾಗಿದೆ. ಯಾವ ಕುಟುಂಬದಲ್ಲಿ/ ಸಮಾಜದಲ್ಲಿ ಸ್ತ್ರೀ-ಪುರುಷ, ಹಿರಿಯ-ಕಿರಿಯ, ಗುರು-ಶಿಷ್ಯ ಮುಂತಾದ ಶ್ರೇಣೀಕರಣಗಳಿಲ್ಲದೆ ಪರಸ್ಪರ ಒಟ್ಟಿಗೆ ಕುಳಿತು ಮುಕ್ತವಾಗಿ ಅಭಿಪ್ರಾಯಗಳನ್ನು ವಿನಿಮಯ ಮಾಡಿಕೊಳ್ಳುವ, ನಿರ್ಧಾರಗಳನ್ನು ಕೈಗೊಳ್ಳುವ ಸಾಧ್ಯತೆ ಇದೆಯೋ ಅಲ್ಲಿ ಆರೋಗ್ಯ ಪೂರ್ಣ ಅಭಿವ್ಯಕ್ತಿ ಸ್ವಾತಂತ್ರ್ಯದ ನೆಲೆಗಳನ್ನು ಗುರುತಿಸಬಹುದು.

ಅದಕ್ಕೆ ಮುಖ್ಯವಾಗುವುದು

* ಸ್ತ್ರೀ ಮೌನದ ಚಿಪ್ಪಿನಿಂದ ಹೊರಬರಬೇಕು. ತನಗೆ ಬೇಡ ಎನಿಸಿದ್ದನ್ನು ಬೇಡ ಎನ್ನಲು ಕಲಿಯುವುದು, ಮುಖ್ಯ ದಾಕ್ಷಿಣ್ಯದ ಉರುಳನ್ನು ಹರಿದೊಗೆಯುವ ಕೆಲಸ ಆಗಬೇಕಿದೆ.

* ವಿದ್ಯಾಭ್ಯಾಸ ಮತ್ತು ಆರ್ಥಿಕ ಸ್ವಾವಲಂಬನೆ ಮಹಿಳೆಗೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ತಕ್ಕಮಟ್ಟಿಗೆ ತಂದಿದೆ; ತರುತ್ತದೆ. ಇದರಿಂದ ಮೂಲೆಯಲ್ಲಿ ನಿಂತವಳು ಒಟ್ಟಿಗೆ ಕೂತಾಳು, ಸಲಹೆಯನ್ನು, ಅಭಿಪ್ರಾಯವನ್ನು ಹೇಳುವ ಅವಕಾಶ ಪಡೆದಾಳು.

* ಮಹಿಳೆಯರಿಗೆ ಉದ್ಯೋಗಾವಕಾಶ ಹೆಚ್ಚು ವಂತೆ ನೋಡಬೇಕು. ರ್‍ಯಾಂಕ್ ಪಡೆದ, ಬುದ್ಧಿವಂತ

ವಿದ್ಯಾರ್ಥಿನಿಯರೂ,ಶಿಕ್ಷಣದ ಬಳಿಕ ಕಾಣೆ ಯಾಗುತ್ತಾರೆ. ಇದೊಂದು ಗಂಭೀರ ವಿಚಾರ.

* ಲಿಂಗತ್ವ ಕುರುಡುತನವನ್ನು (Gender blindness) ಕಿತ್ತೊಗೆದು ಲಿಂಗ ಸಮಾನತೆಯ ಒಂದು ಪರಿಸರವನ್ನು ಹುಟ್ಟುಹಾಕಬೇಕಿದೆ. ಗುಲಾಮ ಗಿರಿ ಒಬ್ಬರ ಪಾಲಲ್ಲ. ಕೆಲಸ-ಕರ್ತವ್ಯಗಳನ್ನು ಹಂಚಿ ಮಾಡಬೇಕೆಂಬ ಅರಿವು ಮಾಡಬೇಕಿದೆ.

* ರಾಜಕೀಯ ಹಾಗು ಸಾಮಾಜಿಕ ರಂಗಳಲ್ಲಿ ಮಹಿಳೆ ಹೆಚ್ಚು ಹೆಚ್ಚು ಪಾಲ್ಗೊಳ್ಳುವಂತೆ ಆಗಬೇಕು.

ಸ್ವನಿರ್ಧಾರವನ್ನು, ಸ್ವಂತದ ಕನಸುಗಳನ್ನು ಗುರುತಿಸಿ, ಅನುಷ್ಠಾನಕ್ಕೆ ತರುವ ಹೋರಾಟಕ್ಕೆ ಸಿದ್ಧಳಾಗ ಬೇಕು.

* ಆ ಮೂಲಕ ನಿರ್ಮಾಣವಾಗುವ ಸ್ವಸ್ಥ ಆರೋಗ್ಯ ಪೂರ್ಣ ಸಮಾಜದ ನಿರ್ಮಾಣದಲ್ಲಿ ಸ್ತ್ರೀ ಪುರುಷರಿಬ್ಬರೂ ಪಾಲ್ಗೊಳ್ಳಬೇಕಿದೆ.

# ಹೊನ್ನಿನ ಹಂದರದಲ್ಲಿ
# ಸುಂದರ ಕರ್ನಾಟಕ

---

ಕರುನಾಡ ಸಿರಿನುಡಿ – ಕನ್ನಡ

ಕಸ್ತೂರಿ ಪರಿಮಳದ ಕುಡಿ – ಕನ್ನಡ ನುಡಿ

ಹಾಲ್ಜೇನಿನ ಮಧುರ ಝುರಿ – ಕನ್ನಡ ನಾಣ್ನುಡಿ

---

ಸುಮಾರು 2000 ವರ್ಷಗಳ ಇತಿಹಾಸವಿರುವ ಕನ್ನಡ
ಭಾಷೆ, ಸಾಹಿತ್ಯ ಅನನ್ಯ ಮತ್ತು ಅನುಕರಣೀಯ.
ಇಂದು ಕೂಡ ಕರ್ನಾಟಕ ಸಮಗ್ರ ಮಾಹಿತಿ
ತಂತ್ರ ಜ್ಞಾನ, ಆಟೋಮೊಬೈಲ್
ಉದ್ಯಮ, ಸಿದ್ಧ ಉಡುಪು, ಆಭರಣಗಳು, ಕ್ರೀಡೆ,
ಪುಷ್ಪೋದ್ಯಮದಂತಹ ಪ್ರಮುಖ ಕ್ಷೇತ್ರಗಳಲ್ಲಿ ಸಾಧಿಸಿದ
ಪ್ರಗತಿಯೂ ಶ್ಲಾಘನೀಯ, ಕರ್ನಾಟಕ ಭಾರತಕ್ಕಷ್ಟೇ
ಮಾತ್ರವಲ್ಲ ಇಡೀ ವಿಶ್ವಕ್ಕೆ ಮಾದರಿ.

ಅಪಾರ ಕೀರ್ತಿಗಳಿಸಿ ಮೆರೆವ ಭವ್ಯನಾಡಿಗೆ ... ಇಂದು ಸುವರ್ಣ ಸಂಭ್ರಮ.

ಸುವರ್ಣ ಕರ್ನಾಟಕ ವರ್ಷ : 2006

CPMG/KA/BGS-8/2006-08
RNI NO.45577/88
Posted at Basavanagudi P.O. on the 25/29th of the every month
May - 2007

## ಹೆಣ್ಣು ಹೆಂಗಸಾಗಿ ನೀವು ಹೀಗೆಂದರೆ....

ಹೆಣ್ಣು ಹೆಂಗಸು ಹೇಗೆ ಆಡಳಿತ ನಡೆಸಬೇಕು? – ಎಂದು ಇತ್ತೀಚೆಗೆ ನಮ್ಮ ಮುಖ್ಯ ಮಂತ್ರಿಗಳು ಮುಕ್ತ ವಿಶ್ವವಿದ್ಯಾಲಯದ ಕುಲಪತಿ ಡಾ॥ ಸುಧಾರಾವ್‌ರವರಿಗೆ ಪಾಠ ಹೇಳಿದರು. ಅದೂ ಛೀಮಾರಿ ಹಾಕುವ ಧಾಟಿಯಲ್ಲಿ. ಮಹಿಳೆಯರು ಆಡಳಿತ ನಡೆಸಲು ಅಶಕ್ತರು ಎಂಬುದನ್ನು ಸ್ವತಃ ನಿರ್ಧರಿಸಿ ಬಿಟ್ಟಿರುವ ಮುಖ್ಯ ಮಂತ್ರಿಗಳು ತಮ್ಮ ಮಂತ್ರಿ ಮಂಡಲದಲ್ಲಿ ಒಬ್ಬ ಹೆಂಗಸಿಗೂ ಮಂತ್ರಿ ಪದವಿಯನ್ನು ಕೊಟ್ಟಿಲ್ಲ! ಆದರೂ ಪ್ರಜಾಪ್ರಭುತ್ವದ ಆಳ್ವಿಕೆಯಲ್ಲಿ ಹೀಗೆ ಮಾಡುವುದು ಸರಿಯೇ? ಮುಖ್ಯ ಮಂತ್ರಿಯವರ ನಿರಂಕುಶ ಆಡಳಿತ ವೈಖರಿ ಎಷ್ಟು ಖಂಡನೀಯವೋ ಅಷ್ಟೇ ಅಸಂಬದ್ಧವಾದುದು ಶಿಕ್ಷಣ ಕ್ಷೇತ್ರದ ಅಧಿಕಾರಿಯನ್ನು ನಡೆಸಿಕೊಂಡ ಬಗೆ. ಸಮತಾದ ಗೆಳತಿಯರು ಇದನ್ನು ಧರಣಿಯ ಮೂಲಕ ಪ್ರತಿಭಟಿಸಿದ್ದಾರೆ. ಮುಖ್ಯ ಮಂತ್ರಿಗಳ ನಡತೆಯನ್ನು ನಾವೂ ಪ್ರತಿಭಟಿಸುತ್ತೇವೆ.

To : Smt / Sri

"Achala" 108, Skyline Surabhi,
14-P, Vidyapeeta Road,
BSK 3rd Stage,
Bangalore - 560 085